ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3334
2. ಸದಸ್ಯರ ಹೆಸರು : ಶ್ರೀ ಸಿ.ಎಸ್. ನಿರಂಜನ್ ಕುಮಾರ್
3. ಉತ್ತರಿಸಬೇಕಾದ ದಿನಾಂಕ : 23.03.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

<table>
<tr><th>ಕ್ರ ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ</td><td>ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕೇಂದ್ರ ಸರ್ಕಾರದ ತನಿಖಾ ತಂಡದಿಂದ ಅಂತರ್ಜಲ ಮಟ್ಟ ತನಿಖೆ ನಡೆಸಿ, ಅಂತರ್ಜಲ ಇಲ್ಲದೇ ಇರುವುದರಿಂದ ಕೊಳವೆ ಬಾವಿಗಳನ್ನು ಕೊರೆಸಲು ಅನುಮತಿ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ</td><td>ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯಡಿ ಅಂತರ್ಜಲ ನಿರ್ದೇಶನಾಲಯವು ಕೇಂದ್ರೀ ಅಂತರ್ಜಲ ಮಂಡಳಿಯವರ ಸಹಯೋಗದೊಂದಿಗೆ ರಾಜ್ಯದ ಅಂತರ್ಜಲ ಸಂಪನ್ಮೂಲವನ್ನು ಮಾರ್ಚ 2017ರ ಅಂತ್ಯಕ್ಕೆ ಮೌಲೀಕರಿಸಿದಂತೆ, ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.<br><br>
<table>
<tr><th>ಕ್ರ.ಸಂ</th><th>ವರ್ಗೀಕರಣ</th><th>ತಾಲ್ಲೂಕು</th></tr>
<tr><td>1</td><td>ಅತಿಬಳಕೆ (ಅಂತರ್ಜಲ ಬಳಕೆಯು ವಾರ್ಷಿಕ ಮರುಪೂರಣ ಪ್ರಮಾಣದ ಶೇ. 100ಕ್ಕಿಂತ ಹೆಚ್ಚು ಬಳಕೆ)</td><td>45</td></tr>
<tr><td>2</td><td>ಕ್ಲಿಷ್ಟಕರ (ಅಂತರ್ಜಲ ಬಳಕೆಯು ವಾರ್ಷಿಕ ಮರುಪೂರಣ ಪ್ರಮಾಣದ ಶೇ.90 ರಿಂದ 100)</td><td>08</td></tr>
<tr><td>3</td><td>ಅರೆಕ್ಲಿಷ್ಟಕರ (ಅಂತರ್ಜಲ ಬಳಕೆಯು ವಾರ್ಷಿಕ ಮರುಪೂರಣ ಪ್ರಮಾಣದ ಶೇ. 70 ರಿಂದ 90).</td><td>26</td></tr>
<tr><td>4</td><td>ಸುರಕ್ಷಿತ (ಅಂತರ್ಜಲ ಬಳಕೆಯು ವಾರ್ಷಿಕ ಮರುಪೂರಣ ಪ್ರಮಾಣದ ಶೇ. 70 ಕ್ಕಿಂತ ಕಡಿಮೆ ಎಂದು ವರ್ಗೀಕರಿಸಲಾಗಿದೆ</td><td>97</td></tr>
</table>
<br>ಕರ್ನಾಟಕ ಅಂತರ್ಜಲ (ಅಭಿವೃದ್ಧಿ ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರ ಅಧಿನಿಯಮ 2011 ಮತ್ತು ನಿಯಮಾವಳಿ 2012ರ ಅನುಸಾರ ಅಂತರ್ಜಲ ಅತಿಬಳ ತಾಲ್ಲೂಕುಗಳೆಂದು 45 ತಾಲ್ಲೂಕುಗಳಲ್ಲಿ ಅಂತರ್ಜಲ ಅಧಿನಿಯಮವನ್ನು ಅನುಷ್ಠಾನಗೊಳಿಸಲ ದಿನಾಂಕ: 05-08-2020ರಿಂದ ಜಾರಿಗೆ ಬರುವಂತೆ ಅಧಿಸೂಚಿಸಲಾಗಿದೆ. ಸದರಿ ಅತಿಬಳ ತಾಲ್ಲೂಕುಗಳಲ್ಲಿ ಗುಂಡ್ಲುಪೇಟೆ ತಾಲ್ಲೂಕು ಒಳಗೊಂಡಿರುತ್ತದೆ.<br><br>ಕರ್ನಾಟಕ ಅಂತರ್ಜಲ ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರ ಅಧಿನಿಯಮ 2011 ಮತ್ತು 2012ರ ನಿಯಮಾವಳಿಗಳಂತೆ ಜಿಲ್ಲೆಯ ಅಂತರ್ಜಲ ಅತಿಬಳ ತಾಲ್ಲೂಕೆಂದು ಅಧಿಸೂಚಿತವಾಗಿರುವ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ವೈಯಕ್ತಿಕ ಅಥವಾ ಸಮುದಾಯ (ಸರಕಾರಿ/ ನಿಗಮ/ ಖಾಸಗಿ ಯವರುಗಳು) ಯಾವುದೇ ಉದ್ದೇಶಕ್ಕಾಗಿ ಕೊಳವೆಬಾಗಿ ಕೊರೆಸಲು ತೋಡಲು ಇಚ್ಛಿಸಿದಲ್ಲಿ, ಆ ಉದ್ದೇಶಕ್ಕೆ ಕೋರಿ ಜಿಲ್ಲಾ ಅಂತರ್ಜಲ ಸಮಿತಿಗೆ ಅರ್ಜಿ ಸಲ್ಲಿಸಿ, ಅನುಮ ಪಡೆದು ಕೊಳವೆಬಾವಿ ಕೊರೆಸತಕ್ಕದ್ದು, ಈಗಾಗಲೇ ಅಧಿಸೂಚನೆಗಿಂತ ಮುಂಚಿತವಾಗಿ ಕೊರೆದಿರು ಕೊಳವೆಬಾವಿಗಳನ್ನು ಜಿಲ್ಲಾ ಅಂತರ್ಜಲ ಸಮಿತಿಯಲ್ಲಿ ನೋಂದಣಿ ಮಾಡಿಸುವ ಪ್ರಕ್ರಿ ಜಾರಿಯಲ್ಲಿರುತ್ತದೆ. ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಹೊಸ ಕೊಳವೆಬಾವಿ ಕೊರೆಸಲು ಬಂದಿರು ಅರ್ಜಿಗಳನ್ನು ಜಿಲ್ಲಾ ಅಂತರ್ಜಲ ಸಮಿತಿ ಸಭೆಯಲ್ಲಿ ಮಂಡಿಸಿ ಸಭೆಯ ನಿರ್ಣಯದಂತೆ ಅಜಿ ವಿಲೇವಾರಿಗೆ ಕ್ರಮ ವಹಿಸಲಾಗುತ್ತಿದೆ.</td></tr>
</table>

ಆ

ಬಂದಿದಲ್ಲಿ, ಸಣ್ಣ ನೀರಾವರಿ ಮತ್ತು ಅಂರ್ಜಲ ಅಭಿವೃದ್ಧಿ ಇಲಾಖೆಯ ವತಿಯಿಂದ ಗುಂಡ್ಲುಪೇಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ಅಂತರ್ಜಲ ಮಟ್ಟ ಹೆಚ್ಚಿಸಲು ಯಾವಯಾವ ಯೋಜನೆಗಳಲ್ಲಿ ಯಾವ ಯಾವ ಕಾಮಗಾರಿಗಳಿಗೆ ಅನುದಾನ ಮಂಜೂರು ಮಾಡಲಾಗಿದೆ (ಯೋಜನೆ ವಾರು, ಕಾಮಗಾರಿವಾರು ವಿವರ ನೀಡುವುದು)?

ಸಣ್ಣ ನೀರಾವರಿ ಇಲಾಖೆಯಡಿ ಒದಗಿಸಲಾಗುವ ಅನುದಾನಕ್ಕನುಗುಣವಾಗಿ ರಾಜ್ಯದ ಅಂತರ್ಜಲ ಅಭಿವೃದ್ಧಿ ಕಾಮಗಾರಿಗಳನ್ನು ಅವಶ್ಯಕತೆಗೆ ಅನುಗುಣವಾಗಿ ಮತ್ತು ಆದ್ಯತೆಯ ಮೇ ಕೈಗೊಳ್ಳಲಾಗುತ್ತಿದೆ. ಅದರಂತೆ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಕೆರೆಗಳ ಹೂಳನ್ನು ತೆಗೆಯುವುದು ಮ ಇನ್ನಿತರೆ ಅವಶ್ಯಕ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ಈ ಸಂಬಂಧ ಕಳೆದ ಎರ ವರ್ಷಗಳಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರಗಳು ಕೆಳಕಂಡಂತಿವೆ.

| ಕ್ರ ಸಂ | ಜಿಲ್ಲೆ | ತಾಲ್ಲೂಕು | ವರ್ಷ | ಲೆಕ್ಕ ಶೀರ್ಷಿಕೆ | ಕಾಮಗಾರಿಗಳ ಸಂಖ್ಯೆ | ಅಂದಾಜು ಮೊತ್ತ |
|---|---|---|---|---|---|---|
| 1 | ಚಾಮರಾಜನಗರ | ಗುಂಡ್ಲುಪೇಟೆ | 2018–19 | ಗಿರಿಜನ ಉಪ ಯೋಜನೆ | 3 | 125.00 |
| | | | | ಒಟ್ಟು | 3 | 125.00 |
| 2. | ಚಾಮರಾಜನಗರ | ಗುಂಡ್ಲುಪೇಟೆ | 2019–20 | ವಿಶೇಷ ಘಟಕ ಯೋಜನೆ | 3 | 100.00 |
| | | ಗುಂಡ್ಲುಪೇಟೆ | 2019–20 | ಕೆರೆ ಸಂಜೀವಿನಿ | 8 | 26.00 |
| | | ಗುಂಡ್ಲುಪೇಟೆ | 2019–20 | ಗಿರಿಜನ ಉಪಯೋಜನೆ – ಕೆರೆ ಸಂಜೀವಿನಿ | 1 | 4.00 |
| | | | | ಒಟ್ಟು | 12 | 130.00 |
| | | | | ಒಟ್ಟಾರೆ | 15 | 255.00 |

ಕಾಮಗಾರಿವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಕಡತ ಸಂಖ್ಯೆ: ಒಎಸ್ಎ 210 ಪಿಎಲ್‌ಎ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.

# ಶ್ರೀ ನಿರಂಜನ್ ಕುಮಾರ್ ಸಿ.ಎಸ್., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:3334ಕ್ಕೆ ಅನುಬಂಧ-1

ರೂ.ಲಕ್ಷಗಳಲ್ಲಿ

| ಕ್ರಸಂ | ಜಿಲ್ಲೆ | ತಾಲ್ಲೂಕು | ಕ್ಷೇತ್ರ | ವರ್ಷ | ಲೆಕ್ಕ ಶೀರ್ಷಿಕೆ | ಕಾಮಗಾರಿ ಹೆಸರು | ಮಂಜೂರಾದ ಅಂದಾಜು ಮೊತ್ತ | ಅನುಮೋದಿತ ಟೆಂಡರ್ ಮೊತ್ತ | ಒಟ್ಟಾರೆ ವೆಚ್ಚ | ಕಾಮಗಾರಿಯ ಪ್ರಸಕ್ತ ಹಂತ |
|---|---|---|---|---|---|---|---|---|---|---|
| 1 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2018-19 | ಗಿರಿಜನ ಉಪ ಯೋಜನೆ | ಮೂಖಳ್ಳಿ ಗ್ರಾಮದ ಪರಿಶಿಷ್ಟ ವರ್ಗ ಜನಾಂಗದವರ ಜಮೀನಿನ ಹತ್ತಿರ ಹಳ್ಳಕ್ಕೆ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿ | 25.00 | 15.70 | 24.90 | ಕಾಮಗಾರಿ ಪೂರ್ಣಗೊಂಡಿದೆ |
| 2 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2018-19 | ಗಿರಿಜನ ಉಪ ಯೋಜನೆ | ಬರಗಿ ಹಾಗೂ ಹೊಂಗಳ್ಳಿ ಗ್ರಾಮದ ಪರಿಶಿಷ್ಟ ಪಂಗಡದವರ ಜಮೀನಿನ ಹತ್ತಿರ ಇರುವ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ. | 50.00 | 35.71 | 39.33 | ಕಾಮಗಾರಿ ಪೂರ್ಣಗೊಂಡಿದೆ |
| 3 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2018-19 | ಗಿರಿಜನ ಉಪ ಯೋಜನೆ | ಉತ್ತೂರು ಗ್ರಾಮದ ಪರಿಶಿಷ್ಟ ಪಂಗಡದವರ ಜಮೀನಿನ ಹತ್ತಿರ ಇರುವ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ. | 50.00 | 30.16 | 0.00 | ಕಾಮಗಾರಿ ಪೂರ್ಣಗೊಂಡಿದೆ |
| | | | | | | ಒಟ್ಟು | 125.00 | 81.57 | 64.23 | |
| 1 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ವಿಶೇಷ ಘಟಕ ಯೋಜನೆ | ಶಿಂಡನಪುರ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದವರ ಜಮೀನಿನ ಹತ್ತಿರ ಇರುವ ಶಿಂಡನಪುರ ಕಟ್ಟೆ ಅಭಿವೃದ್ಧಿಪಡಿಸುವ ಕಾಮಗಾರಿ. | 25.00 | 13.92 | 0.00 | ಕಾಮಗಾರಿ ಪೂರ್ಣಗೊಂಡಿದೆ |
| 2 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ವಿಶೇಷ ಘಟಕ ಯೋಜನೆ | ಕಲ್ಲಿಗೌಡನಹಳ್ಳಿ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದವರ ಜಮೀನಿನ ಹತ್ತಿರ ಇರುವ ಕಲ್ಲಿಗೌಡನ ವಗರಗಟ್ಟೆ ಕೆರೆ ಅಭಿವೃದ್ಧಿ ಕಾಮಗಾರಿ. | 25.00 | 14.50 | 0.00 | ಕಾಮಗಾರಿ ಪೂರ್ಣಗೊಂಡಿದೆ |
| 3 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ವಿಶೇಷ ಘಟಕ ಯೋಜನೆ | ವಡ್ಡಗೆರೆ ಕೆರೆಯಿಂದ ಹೆಗ್ಗವಾಡಿ ಗ್ರಾಮದ ಪರಿಶಿಷ್ಟ ಜಾತಿ ಜನಾಂಗದವರ ಜಮೀನಿನ ಹತ್ತಿರ ಇರುವ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ. | 50.00 | 39.94 | 0.00 | ಕಾಮಗಾರಿ ಪೂರ್ಣಗೊಂಡಿದೆ |
| 4 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಕಲ್ಲಟ್ಟಿ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 5 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ವಿಜಯಪುರ ಅಮಾನಿ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 6 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಕೂತನೂರು ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 7 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಹೊನ್ನೇಗೌಡನಹಳ್ಳಿ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 8 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ದೇವಾಲಪುರ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 9 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ವಡ್ಡಗೆರೆ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 2.00 | 1.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 10 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಕೋಟೆ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 2.00 | 1.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 11 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ಶ್ಯಾಂಡ್ರಹಳ್ಳಿ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 2.00 | 1.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| 12 | ಚಾಮರಾಜನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | 2019-20 | ಗಿರಿಜನ ಉಪ ಯೋಜನೆ - ಕೆರೆ ಸಂಜೀವಿನಿ | ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕು ವಿಜಯಪುರ ಅಮ್ಮಾನಿ ಕೆರೆಯ ಅಂಗಳದಲ್ಲಿ ಹೂಳನ್ನು ತೆಗೆಯುವ ಕಾಮಗಾರಿ. | 4.00 | 3.99 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| | | | | | | ಒಟ್ಟು | 130.00 | 98.27 | 0.00 | |

ವಿಧಾನಸಭೆ 88-13
Starred
23-03-2021

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3317

2) ವಿಧಾನಸಭಾ ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್.

3) ಉತ್ತರಿಸಬೇಕಾದ ದಿನಾಂಕ : 23–03–2021

4) ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಸಣ್ಣ ನೀರಾವರಿ ಇಲಾಖೆಯಲ್ಲಿ ಕಿರಿಯ ಹಾಗೂ ಸಹಾಯಕ ಇಂಜಿನಿಯರ್ ಹುದ್ದೆಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಣ್ಣ ನೀರಾವರಿ ಇಲಾಖೆಯಲ್ಲಿನ ಕಿರಿಯ ಹಾಗೂ ಸಹಾಯಕ ಇಂಜಿನಿಯರ್‌ಗಳ ಖಾಲಿ ಹುದ್ದೆಗಳಿಗೆದುರಾಗಿ ಲೋಕೋಪಯೋಗಿ ಹಾಗೂ ಜಲಸಂಪನ್ಮೂಲ ಇಲಾಖೆಗಳ ಕಿರಿಯ ಹಾಗೂ ಸಹಾಯಕ ಇಂಜಿನಿಯರ್‌ಗಳನ್ನು ನಿಯೋಜನೆ ಮೇಲೆ ಪಡೆದು ನೇಮಿಸಲಾಗುತ್ತಿದೆ.<br><br>ಪ್ರಸ್ತುತ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಮಂಜೂರಾದ, ಭರ್ತಿಯಾದ ಮತ್ತು ಖಾಲಿ ಇರುವ ಹುದ್ದೆಗಳ ವಿವರಗಳು ಈ ಕೆಳಕಂಡಂತಿರುತ್ತವೆ :<br><br>(see table below)<br><br>ಮೇಲ್ಕಂಡ ಅಂಕಿ–ಅಂಶಗಳನ್ನು ಅವಲೋಕಿಸಿದಾಗ, ಸಣ್ಣ ನೀರಾವರಿ ಇಲಾಖೆಯಲ್ಲಿ ಖಾಲಿ ಹುದ್ದೆಗಳ ಸಂಖ್ಯೆ ತೀರಾ ಕಡಿಮೆಯಿರುತ್ತದೆ. |
| ಆ) | ಈ ಹುದ್ದೆಗಳ ಕೊರತೆಯಿಂದಾಗಿ ಇಲಾಖೆಯಲ್ಲಿ ಕಾಮಗಾರಿಗಳ ಪ್ರಗತಿ ಕುಂಠಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲಾಖೆಯಲ್ಲಿ ಲಭ್ಯವಿರುವ ಅಧಿಕಾರಿಗಳಿಂದ ಕಾಮಗಾರಿಗಳ ನಿರ್ವಹಣೆ ಮಾಡಲಾಗುತ್ತಿದ್ದು, ಕಾಮಗಾರಿಗಳ ಪ್ರಗತಿ ಕುಂಠಿತವಾಗದಂತೆ ಕ್ರಮ ವಹಿಸಲಾಗುತ್ತಿದೆ. |
| ಇ) | ಹೊರಗುತ್ತಿಗೆ ಆಧಾರದ ಮೇಲೆ ಕಿರಿಯ ಮತ್ತು ಸಹಾಯಕ ಇಂಜಿನಿಯರ್‌ಗಳನ್ನು ನೇಮಕ ಮಾಡಿಕೊಳ್ಳುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹೊರಗುತ್ತಿಗೆ ಆಧಾರದ ಮೇಲೆ ಕಿರಿಯ ಮತ್ತು ಸಹಾಯಕ ಇಂಜಿನಿಯರ್‌ಗಳನ್ನು ನೇಮಕ ಮಾಡಿಕೊಳ್ಳುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |

| | ಸಹಾಯಕ ಇಂಜಿನಿಯರ್ | ಕಿರಿಯ ಇಂಜಿನಿಯರ್ |
|---|---|---|
| ಮಂಜೂರಾದ ಹುದ್ದೆಗಳ ಸಂಖ್ಯೆ | 347 | 195 |
| ಭರ್ತಿಯಾದ ಹುದ್ದೆಗಳ ಸಂಖ್ಯೆ | 235 | 138 |
| ಖಾಲಿ ಇರುವ ಹುದ್ದೆಗಳ ಸಂಖ್ಯೆ | 96 | 57 |

| | | |
|---|---|---|
| ಈ) | ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರಕ್ಕೆ ಇರುವ ತೊಡಕುಗಳೇನು; | ಮಂಜೂರಾದ ಹುದ್ದೆಗಳಿಗೆ ಎದುರಾಗಿ ಮಾತ್ರ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶವಿರುತ್ತದೆ. ಆದರೆ ಸಣ್ಣ ನೀರಾವರಿ ಇಲಾಖೆಗೆ ಪ್ರತ್ಯೇಕವಾದ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆಯಾಗಿಲ್ಲದೇ ಇರುವುದರಿಂದ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಲು ಪ್ರಸ್ತಾವನೆ ಸಧ್ಯಕ್ಕೆ ಇರುವುದಿಲ್ಲ. |
| ಉ) | ಸಣ್ಣ ನೀರಾವರಿ ಇಲಾಖೆಯಲ್ಲಿ ಕಿರಿಯ ಮತ್ತು ಸಹಾಯಕ ಇಂಜಿನಿಯರ್‌ಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡು ಕಾಮಗಾರಿಗಳ ಪ್ರಗತಿಗೆ ಸರ್ಕಾರ ಕೈಗೊಂಡ ಕ್ರಮಗಳೇನು (ಪೂರ್ಣ ವಿವರ ಒದಗಿಸುವುದು)? | ಉದ್ಭವಿಸುವುದಿಲ್ಲ. |

ಸಂಖ್ಯೆ : ಎಂಐಡಿ 184 ಎಲ್‌ಎಕ್ಯೂ 2021.

(ಜೆ. ಸಿ. ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು

# ಕರ್ನಾಟಕ ವಿಧಾನಸಭೆ

02

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3424 |
| ಸದಸ್ಯರ ಹೆಸರು | : | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ಸ್ವೀಕರಣ ಹಾಗೂ ವಿತರಣಾ ಕೇಂದ್ರಗಳು ಯಾವುವು; | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ಉಪಕೇಂದ್ರಗಳು ಕೆಳಕಂಡಂತಿವೆ. (see table below) |

| ಕ್ರಸಂ | ತಾಲ್ಲೂಕು | ವಿದ್ಯುತ ಉಪಕೇಂದ್ರದ ಹೆಸರು |
|---|---|---|
| 1 | ಸಂತೆ ಸರಗೂರು | 66/11 ಕೆ.ವಿ ಸಂತೆ ಸರಗೂರು |
| 2 | | 66/11 ಕೆ.ವಿ ಬಿ.ಮಟಕೆರೆ |
| 3 | ಹೆಚ್.ಡಿ. ಕೋಟೆ | 66/11 ಕೆ.ವಿ ಹೆಚ್.ಡಿ.ಕೋಟೆ |
| 4 | | 66/11 ಕೆ.ವಿ ಹಂಪಾಪುರ |
| 5 | | 66/11 ಕೆ.ವಿ ಅಂತರಸಂತೆ |

| | ಪ್ರಶ್ನೆ | ಉತ್ತರ |
|---|---|---|
| ಆ) | ಈ ಕೇಂದ್ರಗಳಿಗೆ ಲಿಂಕ್ ಮಾಡಲಾಗಿರುವ ವಿತರಣಾ ಲೈನುಗಳು ಹಾಗೂ ಕಾರ್ಯಭಾರದ (ಲೋಡ್) ಪ್ರಮಾಣಗಳಾವುವು; (ವಿವರ ನೀಡುವುದು) | ಈ ವಿದ್ಯುತ್ ಉಪಕೇಂದ್ರಗಳಿಗೆ ಲಿಂಕ್ ಮಾಡಲಾಗಿರುವ ವಿತರಣಾ ಲೈನುಗಳು ಹಾಗೂ ಪ್ರಸಕ್ತ ಸಾಲಿನಲ್ಲಿ ಅವುಗಳ ಮೇಲಿನ ವಿದ್ಯುತ್ ಭಾರದ (ಲೋಡ್) ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ) | ಈ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಗೆ ಬೇಡಿಕೆ ಇರುವ ಹಾಗೂ ಪೂರೈಕೆ ಮಾಡುತ್ತಿರುವ ವಿದ್ಯುತ್ ಪ್ರಮಾಣವೆಷ್ಟು; | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ತಾಲ್ಲೂಕಿನ ಪ್ರಸ್ತುತ ಪ್ರತಿದಿನದ ವಿದ್ಯುತ್ ಬೇಡಿಕೆ 13.5 ಮೆ.ವ್ಯಾ ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕಿನ ಪ್ರಸ್ತುತ ಪ್ರತಿದಿನದ ವಿದ್ಯುತ್ ಬೇಡಿಕೆ 48 ಮೆ.ವ್ಯಾ ಆಗಿರುತ್ತದೆ. ಪ್ರಸ್ತುತ ಬೇಡಿಕೆಗನುಗುಣವಾಗಿ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ. |
| ಈ) | ಸದರಿ ತಾಲ್ಲೂಕಿನಲ್ಲಿ ವಿದ್ಯುತ್ ಪೂರೈಕೆಯಲ್ಲಿ ಬಹಳ ಸಮಸ್ಯೆಗಳಿದ್ದು, ಸಮರ್ಪಕ ವಿದ್ಯುತ್ ಪೂರೈಕೆಗಾಗಿ ಹೆಚ್ಚುವರಿ ವಿದ್ಯುತ್ ಉಪ ಕೇಂದ್ರಗಳು ಹಾಗೂ ಶಾಖಾ ಕಛೇರಿಗಳ ಅವಶ್ಯಕತೆ ಇರುವುದರ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸ್ವೀಕೃತವಾಗಿರುವುದೇ; | ಚಾವಿಸನಿನಿ ವ್ಯಾಪ್ತಿಯ ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕುಗಳಲ್ಲಿ ಪ್ರಸ್ತುತ ಸರ್ಕಾರದ ಆದೇಶದಂತೆ ವಿದ್ಯುತ್ ಪೂರೈಕೆ ಮಾಡಲಾಗುತ್ತಿದ್ದು, ಯಾವುದೇ ಸಮಸ್ಯೆ ಇರುವುದಿಲ್ಲ. |

| | | |
|---|---|---|
| | | ಪ್ರಸ್ತುತ ಪ್ರತಿದಿನ ನಗರ ಪ್ರದೇಶ ಹಾಗೂ ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ಬರುವ ಗ್ರಾಮೀಣ ಪ್ರದೇಶಗಳಿಗೆ 22 ರಿಂದ 24 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಪೂರೈಸಲಾಗುತ್ತಿದೆ.<br>ತಾಂತ್ರಿಕ ಸಾಧ್ಯತೆ ಇರುವ ವಿದ್ಯುತ್ ಉಪಕೇಂದ್ರಗಳಿಂದ ಹೊರಹೊಮ್ಮುವ ಗ್ರಾಮಿಣ/ಕೃಷಿ ವಿದ್ಯುತ್ ವಿತರಣಾ ಮಾರ್ಗಗಳ ರೈತರ ನೀರಾವರಿ ಪಂಪ್ ಸೆಟ್ ಗಳಿಗೆ ಪ್ರಸ್ತುತ ಪ್ರತಿದಿನ ಹಗಲಿನ ವೇಳೆಯಲ್ಲಿ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಪೂರೈಸಲಾಗುತ್ತಿದೆ. ತಾಂತ್ರಿಕ ಸಾಧ್ಯತೆ ಇಲ್ಲದ ವಿದ್ಯುತ್ ಉಪಕೇಂದ್ರಗಳಿಂದ ಹೊರಹೊಮ್ಮುವ ಗ್ರಾಮಿಣ/ಕೃಷಿ ವಿದ್ಯುತ್ ವಿತರಣಾ ಮಾರ್ಗಗಳ ರೈತರ ನೀರಾವರಿ ಪಂಪ್ ಸೆಟ್ ಗಳಿಗೆ ಸರ್ಕಾರದ ಆದೇಶದನ್ವಯ ಪ್ರಸ್ತುತ್ತ ಪ್ರತಿ ದಿನ ಹಗಲಿನ ವೇಳೆ 4:00 ಗಂಟೆ ಹಾಗೂ ರಾತ್ರಿ 3:00 ಗಂಟೆ ಒಟ್ಟು 7 :00 ಗಂಟೆಗಳ ಕಾಲ 3ಫೇಸ್ ವಿದ್ಯುತ್ ನೀಡಲಾಗುತ್ತಿದೆ.<br>ಹೆಚ್.ಡಿ.ಕೋಟೆ ತಾಲ್ಲೂಕಿನ ಎರೆಹಳ್ಳಿ ಗ್ರಾಮದಲ್ಲಿ 66/11 ಕೆ.ವಿ ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸಲು ಕ.ವಿ.ಪ್ರ.ನಿ.ನಿಯು ಉದ್ದೇಶಿಸಿದ್ದು, ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |
| ಉ) | ಸ್ವೀಕೃತವಾಗಿದ್ದಲ್ಲಿ, ಪ್ರಸ್ತಾವನೆಯ ಪೂರ್ಣ ವಿವರ ನೀಡುವುದು; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯ ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಬಿದರಹಳ್ಳಿ, ಕಲ್ಲಂಬಾಳು ಶಾಖೆಗಳನ್ನು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕಿಗೆ ಸಂಬಂಧಿಸಿದಂತೆ ಅಣ್ಣೂರು ಶಾಖೆಯನ್ನು ಹೊಸದಾಗಿ ರಚಿಸಲು ಪ್ರಸ್ತಾವನೆ ಇರುತ್ತದೆ. ಮುಂದುವರೆದು, ಯಾವುದೇ ನೂತನ ಶಾಖಾ ಕಛೇರಿ ಸೃಜಿಸಲು ಭೌಗೋಳಿಕ ಪ್ರದೇಶ, ವಿಸ್ತೀರ್ಣ, ಸ್ಥಾವರಗಳ ಸಂಖ್ಯೆ, ಜನ ಸಂಖ್ಯೆ, ಅಧಿಕಾರಿ/ಸಿಬ್ಬಂದಿ ವರ್ಗದ ಅಗತ್ಯತೆ ಮತ್ತು ಆರ್ಥಿಕ ಹೊರೆ ಮಾಹಿತಿಯನ್ನು ಮಾನದಂಡವಾಗಿರಿಸಿಕೊಂಡು ಪರಿಶೀಲಿಸಿ, ಅಗತ್ಯ ಕ್ರಮ ವಹಿಸಲಾಗುತ್ತಿರುತ್ತದೆ. |
| ಊ) | ಈ ಪ್ರಸ್ತಾವನೆಗಳ ಅನುಷ್ಠಾನ ಪ್ರಕ್ರಿಯೆ ಪ್ರಸ್ತುತ ಯಾವ ಹಂತದಲ್ಲಿದೆ; (ವಿವರ ನೀಡುವುದು) | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದಲ್ಲಿ ಸದರಿ ಪ್ರಸ್ತಾವನೆಗಳು ಪರಿಶೀಲನಾ ಹಂತದಲ್ಲಿವೆ. |

**ಸಂಖ್ಯೆ: ಎನರ್ಜಿ 109 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಪ್ರಶ್ನೆ ಸಂಖ್ಯೆ 3424ಕ್ಕೆ ಅನುಬಂಧ

ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಸರಗೂರು ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ಉಪಕೇಂದ್ರಗಳಿಗೆ ಲಿಂಕ್ ಮಾಡಲಾಗಿರುವ ವಿತರಣಾ ಲೈನುಗಳು ಹಾಗೂ ಪ್ರಸಕ್ತ ಸಾಲಿನಲ್ಲಿ ಅವುಗಳ ಮೇಲಿನ ವಿದ್ಯುತ್ ಭಾರದ (ಲೋಡ್) ವಿವರಗಳು

| ಕ್ರಸಂ | ವಿದ್ಯುತ್ ಉಪಕೇಂದ್ರದ ಹೆಸರು | 11 ಕೆ.ವಿ ಮಾರ್ಗಗಳ ವಿವರ | | ವಿದ್ಯುತ್ ಭಾರ | |
|---|---|---|---|---|---|
| | | | | ಮೆ.ವ್ಯಾ | ಆಂಪ್ಸ್ |
| 1 | ಸಂತೆ ಸರಗೂರು | ಎಫ್-1 ಹಂಚಿಪುರ | ಎನ್.ಜೆ.ವೈ | 0.20 | 20.00 |
| | | ಎಫ್-2 ಹೆಗ್ಗನೂರು | ಐ.ಪಿ | 2.20 | 168.00 |
| | | ಎಫ್-3 ಸರಗೂರು ಟೌನ್ | ಅರ್ಬನ್ | 0.60 | 38.00 |
| | | ಎಫ್-4 ಸಾಗರೆ | ಎನ್.ಜೆ.ವೈ | 0.60 | 34.00 |
| | | ಎಫ್-5 ಕಲ್ಲಬಾಳು | ಐ.ಪಿ | 2.70 | 185.00 |
| | | ಎಫ್-6 ಹೆಬ್ಬಾಳ ಗುಪ್ಪೆ | ಐ.ಪಿ | 3.20 | 206.00 |
| | | ಎಫ್-7 ಬ್ರಹ್ಮಗಿರಿ | ಐ.ಪಿ | 2.80 | 194.00 |
| | | ಎಫ್-8 ತುಂಬುಸೋಗೆ | ಎನ್.ಜೆ.ವೈ | 0.50 | 30.00 |
| | | ಎಫ್-9 ಚಾಮಲಾಪುರ | ಎನ್.ಜೆ.ವೈ | 0.60 | 36.00 |
| | | ಎಫ್-10 ಕೊಟ್ಟೆಗಾಲಾ | ಐ.ಪಿ | 2.30 | 164.00 |
| 2 | ಬಿ.ಮಟಕೆರೆ | ಎಫ್-1 ಬಿ.ಮಟಕೆರೆ | ಎನ್.ಜೆ.ವೈ | 1.00 | 60.00 |
| | | ಎಫ್-2 ಬೀರಂಬಳ್ಳಿ | ರೂರಲ್ | 3.30 | 200.00 |
| | | ಎಫ್-3 ಬಂಕವಾಡಿ | ರೂರಲ್ | 2.40 | 148.00 |
| | | ಎಫ್-4 ಬದಗಲಪುರ | ಎನ್.ಜೆ.ವೈ | 0.40 | 26.00 |
| | | ಎಫ್-5 ಚೆನ್ನಿಪುರ | ಐ.ಪಿ | 2.20 | 134.00 |
| | | ಎಫ್-6 ಬಡಗ | ಐ.ಪಿ | 2.90 | 178.00 |
| 3 | ಹೆಚ್.ಡಿ ಕೋಟೆ | ಎಫ್-1 ಕಬಿನಿ | ಐ.ಪಿ | 3.06 | 204.00 |
| | | ಎಫ್-2 ಮೆಟ್ಟಿಕುಪ್ಪೆ | ಐ.ಪಿ | 3.30 | 204.00 |
| | | ಎಫ್-3 ನಾಗನಹಳ್ಳಿ | ಐ.ಪಿ | 2.90 | 182.00 |
| | | ಎಫ್-4 ಹೆಚ್.ಡಿ ಕೋಟೆ | ಅರ್ಬನ್ | 1.10 | 66.00 |
| | | ಎಫ್-5 ಅನ್ನೂರು | ಎನ್.ಜೆ.ವೈ | 1.50 | 92.00 |
| | | ಎಫ್-6 ಭೀಮನ ಹಳ್ಳಿ | ಐ.ಪಿ | 4.50 | 291.00 |
| | | ಎಫ್-7 ಸವ್ವೆ | ಐ.ಪಿ | 3.90 | 246.00 |
| | | ಎಫ್-8 ಚಿಕ್ಕೆರಿಯೂರು | ಐ.ಪಿ | 2.60 | 162.00 |

| | | | | | |
|---|---|---|---|---|---|
| | ಹೆಚ್.ಡಿ ಕೋಟೆ | ಎಫ್–9 ತಾರಾಕಾ | ಎನ್.ಜೆ.ವೈ | 1.80 | 110.00 |
| | | ಎಫ್–10 ಪಡುಕೋಟೆ | ಎನ್.ಜೆ.ವೈ | 0.62 | 38.00 |
| | | ಎಫ್–11 ಜಿಯಾರಾ | ಐ.ಪಿ | 2.86 | 180.00 |
| | | ಎಫ್–12 ಹೈರಿಗೆ | ಐ.ಪಿ | 3.10 | 200.00 |
| | | ಎಫ್–13 ಇಟ್ನಾ ಕಾಲೋನಿ | ಐ.ಪಿ | 3.20 | 198.00 |
| | | ಎಫ್–14 ಬೆಲಗನಹಳ್ಳಿ | ಐ.ಪಿ | 2.70 | 168.00 |
| 4 | ಹಂಪಾಪುರ | ಎಫ್–1ಕಂಚಮಳ್ಳಿ | ಐ.ಪಿ | 2.16 | 130.00 |
| | | ಎಫ್–2 ಮಲರಹುಂಡಿ | ಐ.ಪಿ | 2.60 | 156.00 |
| | | ಎಫ್–3 ಚುಂಚುರಾಯನ ಹುಂಡಿ | ಐ.ಪಿ | 1.98 | 130.00 |
| | | ಎಫ್–4 ಹ್ಯಾಂಡ್ ಪೋಸ್ಟ್ | ಎನ್.ಜೆ.ವೈ | 1.14 | 66.00 |
| | | ಎಫ್–5 ಹೆರಗಳ್ಳಿ | ಐ.ಪಿ | 3.02 | 192.00 |
| | | ಎಫ್–6 ಮದ್ದೂರು | ಎನ್.ಜೆ.ವೈ | 0.20 | 12.00 |
| | | ಎಫ್–7 ಬಾಚೇಗೌಡನಹಳ್ಳಿ | ಐ.ಪಿ | 3.02 | 190.00 |
| | | ಎಫ್–8 ಲಂಕೆ | ಎನ್.ಜೆ.ವೈ | 0.80 | 48.00 |
| | | ಎಫ್–9 ಮಾದಾಪುರ | ಐ.ಪಿ | 2.16 | 130.00 |
| | | ಎಫ್–10 ಹೋಮ್ಮರಗಳ್ಳಿ | ಅರ್ಬನ್ | 0.30 | 18.00 |
| | | ಎಫ್–11 ಹತ್ವಾಳು | ಎನ್.ಜೆ.ವೈ | 0.44 | 26.00 |
| | | ಎಫ್–12 ಜೋಪವನಹಳ್ಳಿ | ಎನ್.ಜೆ.ವೈ | 1.64 | 102.00 |
| 5 | ಅಂತರಸಂತೆ | ಎಫ್–1 ಬಾವಲಿ | ಎನ್.ಜೆ.ವೈ | 0.80 | 48.00 |
| | | ಎಫ್–2 ಕಾರಾಪುರ | ಐ.ಪಿ | 2.10 | 138.00 |
| | | ಎಫ್–3 ಅಂತರಸಂತೆ | ಎನ್.ಜೆ.ವೈ | 0.60 | 34.00 |
| | | ಎಫ್–4 ಹಿರೆಹಳ್ಳಿ | ಐ.ಪಿ | 2.70 | 180.00 |
| | | ಎಫ್–5 ಸೋಗಳ್ಳಿ | ಐ.ಪಿ | 1.30 | 94.00 |
| | | ಎಫ್–6 ನೂರಲಕುಪ್ಪೆ | ಐ.ಪಿ | 2.00 | 142.00 |
| | | ಎಫ್–7 ಹೊಸಹೊಳಲು | ಐ.ಪಿ | 1.30 | 92.00 |
| | | ಎಫ್–8 ಸೋಗಳ್ಳಿ | ಐ.ಪಿ | 1.30 | 94.00 |

03·

**ಕರ್ನಾಟಕ ವಿಧಾನ ಸಭೆ**

| | | |
|---|---|---|
| 1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3398 |
| 2. ಮಾನ್ಯ ಸದಸ್ಯರ ಹೆಸರು | : | ಶ್ರೀ ಲಿಂಗಣ್ಣ ಎನ್. (ಮಾಯಕೊಂಡ) |
| 3. ಉತ್ತರಿಸುವ ದಿನಾಂಕ | : | 23-3-2021 |
| 4. ಉತ್ತರಿಸುವ ಸಚಿವರು | : | ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ದಾವಣಗೆರೆ ಜಿಲ್ಲೆಯಲ್ಲಿರುವ ಪೊಲೀಸ್ ಠಾಣೆಗಳ ಸಂಖ್ಯೆ ಎಷ್ಟು; ಈ ಪೊಲೀಸ್ ಠಾಣೆಗಳನ್ನು ಜನಸಂಖ್ಯೆಗೆ ಅನುಗುಣವಾಗಿ ಪ್ರಾರಂಭಿಸಲಾಗಿದೆಯೇ; | ದಾವಣಗೆರೆ ಜಿಲ್ಲೆಯಲ್ಲಿ ಒಟ್ಟು 24 ಪೊಲೀಸ್ ಠಾಣೆಗಳಿದ್ದು, ಇವುಗಳನ್ನು ಈ ಹಿಂದೆಯೇ ಜನಸಂಖ್ಯೆಗೆ ಅನುಗುಣವಾಗಿ ಪ್ರಾರಂಭಿಸಲಾಗಿರುತ್ತದೆ. |
| (ಆ) | ಈ ಜಿಲ್ಲೆಯ ಮಾಯಕೊಂಡ ಮೀಸಲು ವಿಧಾನಸಭಾ ಕ್ಷೇತ್ರದಲ್ಲಿ ಎರಡು ಪೊಲೀಸ್ ಠಾಣೆಗಳು ಕಾರ್ಯನಿರ್ವಹಿಸುತ್ತಿದ್ದು, ಇವುಗಳು ಭೌಗೋಳಿಕ ವಿಸ್ತೀರ್ಣಕ್ಕೆ ಅನುಗುಣವಾಗಿ ಇವೆಯೇ; ಇಲ್ಲದಿದ್ದಲ್ಲಿ, ಈ ತಾರತಮ್ಯವನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಮಾಯಕೊಂಡ ವಿಧಾನಸಭಾ ಕ್ಷೇತ್ರದಲ್ಲಿ ಮಾಯಕೊಂಡ ಮತ್ತು ಬಸವಾಪಟ್ಟಣ ಪೊಲೀಸ್ ಠಾಣೆಗಳೆರಡು ಕಾರ್ಯನಿರ್ವಹಿಸುತ್ತಿದ್ದು, ಇವುಗಳಲ್ಲಿ ಮಾಯಕೊಂಡ ಪೊಲೀಸ್ ಠಾಣೆಯು ಈ ಮೊದಲು ಚಿತ್ರದುರ್ಗ ಜಿಲ್ಲೆಯಲ್ಲಿ ಇದ್ದು, ದಾವಣಗೆರೆ ಜಿಲ್ಲೆಯು ಸೃಜನೆಯಾದ ನಂತರ ದಾವಣಗೆರೆ ಜಿಲ್ಲೆಯ ವ್ಯಾಪ್ತಿಗೆ ಬಂದಿರುತ್ತದೆ. ಬಸವಾಪಟ್ಟಣ ಪೊಲೀಸ್ ಠಾಣೆಯನ್ನು 1998ನೇ ಸಾಲಿನಲ್ಲಿ ಹೊಸದಾಗಿ ಸೃಜನೆ ಮಾಡಲಾಗಿರುತ್ತದೆ. ಮೇಲ್ಕಂಡ ಪೊಲೀಸ್ ಠಾಣೆಗಳ ಸೃಜನೆಯಾಗುವ ಸಮಯದಲ್ಲಿ ಭೌಗೋಳಿಕ ವಿಸ್ತೀರ್ಣಕ್ಕನುಗುಣವಾಗಿ ಇರುತ್ತವೆ. |
| (ಇ) | ಈ ಕ್ಷೇತ್ರದ ವ್ಯಾಪ್ತಿಯ ಅನಗೋಡು, ಬಾಡಾ ಮತ್ತು ಲೋಕಿಕೆರೆ ಗ್ರಾಮಗಳಲ್ಲಿ ಹೊಸದಾಗಿ ಪೊಲೀಸ್ ಠಾಣೆ ಪ್ರಾರಂಭಿಸುವಂತೆ ಹಲವಾರು ವರ್ಷಗಳಿಂದ ಬೇಡಿಕೆಯಿರುವುದರಿಂದ ಈ ಗ್ರಾಮಗಳಲ್ಲಿ ಹೊಸದಾಗಿ ಪೊಲೀಸ್ ಠಾಣೆಗಳನ್ನು ಯಾವಾಗ ಪ್ರಾರಂಭಿಸಲಾಗುವುದು; | ಅನಗೋಡು, ಬಾಡಾ ಮತ್ತು ಲೋಕಿಕೆರೆ ಗ್ರಾಮಗಳು ಕ್ರಮವಾಗಿ ದಾವಣಗೆರೆ ಗ್ರಾಮಾಂತರ, ಮಾಯಕೊಂಡ ಮತ್ತು ಹದಡಿ ಪೊಲೀಸ್ ಠಾಣೆಗಳ ವ್ಯಾಪ್ತಿಯಲ್ಲಿದ್ದು, ಸದರಿ ಗ್ರಾಮಗಳಲ್ಲಿ ಹೊಸದಾಗಿ ಪೊಲೀಸ್ ಠಾಣೆಗಳನ್ನು ಸೃಜಿಸಲು ರಾಷ್ಟ್ರೀಯ ಪೊಲೀಸ್ ಆಯೋಗವು ನಿಗದಿಪಡಿಸಿರುವ ಮಾನದಂಡಗಳನ್ನು ಪೂರೈಸಿದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗುವುದು |
| (ಈ) | ಈ ಕ್ಷೇತ್ರದ ಜನಸಂಖ್ಯೆ ಮತ್ತು ಭೌಗೋಳಿಕ ವಿಸ್ತೀರ್ಣಕ್ಕೆ ಅನುಗುಣವಾಗಿ ಪೊಲೀಸ್ ಠಾಣೆಗಳನ್ನು ಪ್ರಾರಂಭಿಸಲು ಸರ್ಕಾರ ಕ್ರಮ ವಹಿಸಲಾಗುವುದೇ? | |

**ಸಂಖ್ಯೆ:ಹೆಚ್‌ಡಿ 53 ಪಿಓಪಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

# ಕರ್ನಾಟಕ ವಿಧಾನ ಸಭೆ

(04)

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3399

ಸದಸ್ಯರ ಹೆಸರು : ಶ್ರೀ ಮುನಿರತ್ನ (ರಾಜರಾಜೇಶ್ವರಿ ನಗರ)

ಉತ್ತರಿಸಬೇಕಾದ ದಿನಾಂಕ : 23/03/2021

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜರಾಜೇಶ್ವರಿನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ರಾಷ್ಟ್ರೀಯ ಹೆದ್ದಾರಿ–4, ತುಮಕೂರು ಮುಖ್ಯರಸ್ತೆ–ಹೊರವರ್ತುಲ ರಸ್ತೆ ಕೂಡು ರಸ್ತೆಯ ಗೊರಗುಂಟೆಪಾಳ್ಯ ಜಂಕ್ಷನ್ ನಲ್ಲಿ ಅತ್ಯಧಿಕ ವಾಹನಗಳ ಸಂಚಾರ ದಟ್ಟಣೆಯಿಂದಾಗಿ ವಾಹನಗಳು ಮತ್ತು ಪಾದಚಾರಿಗಳು ಸಂಚರಿಸಲು ಕಷ್ಟಕರವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಬಂದಿದ್ದಲ್ಲಿ, ಸದರಿ ಜಂಕ್ಷನ್ ನ ಮೂಲಕ ರಾಷ್ಟ್ರೀಯ ಹೆದ್ದಾರಿ–4, ಬಳ್ಳಾರಿ ರಸ್ತೆ, ಮೈಸೂರು ರಸ್ತೆ ಹಾಗೂ ಬೆಂಗಳೂರು ಪ್ರವೇಶಿಸುವ ಹಾಗೂ ಹೊರವರ್ತುಲ ರಸ್ತೆಗಳನ್ನು ಹೊಂದಿಕೊಂಡಂತೆ ಹೊರ ಹೋಗುವ ವಾಹನಗಳು ಗೊರಗುಂಟೆಪಾಳ್ಯ ಜಂಕ್ಷನ್‌ನಲ್ಲಿ ಕೇಂದ್ರೀಕೃತವಾಗುತ್ತಿರುವುದನ್ನು ತಡೆಗಟ್ಟುವ ಗ್ರೇಡ್ ಸೇಪರೇಟರ್ ನಿರ್ಮಾಣ ಯೋಜನೆಯ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು. |

| | | |
|---|---|---|
| ಇ | ಹಾಗಿದ್ದಲ್ಲಿ, ಸದರಿ ಗ್ರೇಡ್ ಸೇಪರೇಟರ್ ನಿರ್ಮಾಣ ಮಾಡಲು ಸರ್ಕಾರಕ್ಕಿರುವ ಅಡೆ-ತಡೆಗಳೇನು? | ಸದರಿ ಗ್ರೇಡ್ ಸೇಪರೇಟರ್ ಕಾಮಗಾರಿಗಳಿಗೆ ರಕ್ಷಣಾ ಇಲಾಖೆಗೆ ಸೇರಿದ ಜಮೀನು ಪ್ರಾಧಿಕಾರಕ್ಕೆ ಹಸ್ತಾಂತರಿಸಿಕೊಳ್ಳುವುದು ಮತ್ತು ಖಾಸಗಿಯವರಿಗೆ ಸೇರಿರುವ ಜಮೀನುಗಳು ಭೂಸ್ವಾಧೀನಪಡಿಸಿಕೊಳ್ಳಲು ಒಡಬಂಡಿಕೆ ಮಾಡಿಕೊಳ್ಳುವ ಪ್ರಕ್ರಿಯೆಯು ಪ್ರಗತಿಯಲ್ಲಿರುವುದರಿಂದ ವಿಳಂಬಕ್ಕೆ ಕಾರಣವಾಗಿರುತ್ತದೆ. ಪ್ರಾಧಿಕಾರದಲ್ಲಿನ ಆರ್ಥಿಕ ಸಂಪನ್ಮೂಲಗಳ ಕೊರತೆಯಿಂದಾಗಿ ಸದರಿ ಕಾಮಗಾರಿಯನ್ನು ನಿರ್ವಹಿಸಲು ಅಡೆ-ತಡೆ ಉಂಟಾಗಿರುತ್ತದೆ. |
| ಈ | ಸದರಿ ಯೋಜನೆಯನ್ನು ಯಾವಾಗ ಕೈಗೆತ್ತಿಗೊಳ್ಳಲಾಗುವುದು?<br><br>(ಸಂಪೂರ್ಣ ಮಾಹಿತಿ ನೀಡುವುದು) | 1) ಬೆಂಗಳೂರು ಹೊರವರ್ತುಲ ರಸ್ತೆಯನ್ನು ಮೇಲ್ದರ್ಜೆಗೆರಿಸುವುದು ಮತ್ತು ಮರು ಪಂಕ್ತೀಕರಣ ಹಾಗೂ ತುಮಕೂರು ರಸ್ತೆ ಜಂಕ್ಷನ್ ನ (ಎನ್‌ಹೆಚ್-4) ಗೊರಗುಂಟೆಪಾಳ್ಯ ಹತ್ತಿರ ಕೆಳಸೇತುವೆ ನಿರ್ಮಾಣ ಮತ್ತು ಕಂಠೀರವ ಸ್ಟುಡಿಯೋ ಜಂಕ್ಷನ್ ನಿಂದ ALISDA ರವರೆಗೆ ರಸ್ತೆ ನಿರ್ಮಾಣ ಕಾಮಗಾರಿಯನ್ನು ರೂ. 60.6 ಕೋಟಿಗಳಲ್ಲಿ, ಮೆ. ಪಿ.ಜೆ.ಪಿ ಇಂಜಿನಿಯರ್ಸ್ ಪ್ರೈ.ಲಿಮಿಟೆಡ್ ರವರಿಗೆ ವಹಿಸಿಕೊಡಲಾಗಿರುತ್ತದೆ. ಗುತ್ತಿಗೆದಾರರು ಕೆಳಸೇತುವೆ ನಿರ್ಮಾಣ ಕಾಮಗಾರಿಯ ಅಡಿಪಾಯಕ್ಕೆ ಪೈಲಿಂಗ್ ಕಾಮಗಾರಿಯನ್ನು ಶೇ.85% ರಷ್ಟು ಪೂರ್ಣಗೊಳಿಸಿದ್ದು, ಇದಕ್ಕಾಗಿ, ಗುತ್ತಿಗೆದಾರರಿಗೆ ರೂ.6.79 ಕೋಟಿಗಳ ಮೊತ್ತವನ್ನು ಸಹ ಪಾವತಿಸಲಾಗಿರುತ್ತದೆ.<br><br>2) Realignment and up-gradation of ORR and construction of elevated road to cross Yeshawanthapura-Tumkur line of South Western Railways from ALISDA to BEL Underpass ನಿರ್ಮಾಣ ಕಾಮಗಾರಿಯನ್ನು ರೂ.192.05 ಕೋಟಿಗಳಲ್ಲಿ ನಿರ್ಮಿಸಲು ಯೋಜಿಸಲಾಗಿತ್ತು.<br><br>ಹೊರವರ್ತುಲ ರಸ್ತೆಯನ್ನು ಸರ್ಕಾರದ ಆದೇಶದ ಮೇರೆಗೆ ದಿನಾಂಕ: 18.02.2016 ರಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮುಂದಿನ ನಿರ್ವಹಣೆಗಾಗಿ ಹಸ್ತಾಂತರಿಸಲಾಗಿರುತ್ತದೆ. ಪ್ರಾಧಿಕಾರದಲ್ಲಿನ ಆರ್ಥಿಕ ಸಂಪನ್ಮೂಲಗಳ ಕೊರತೆಯಿಂದಾಗಿ ಸದರಿ ಕಾಮಗಾರಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಪ್ರಾಧಿಕಾರದ ವಿಷಯ ಸಂಖ್ಯೆ.214/17 ದಿ: 21.12.2017 ರಲ್ಲಿ ನಿರ್ಣಹಿಸಲಾಗಿರುತ್ತದೆ. ಅದರಂತೆ, ಸದರಿ ಕಾಮಗಾರಿಗಳನ್ನು ಯಥಾಸ್ಥಿತಿಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಿಕೊಳ್ಳಲು ಕ್ರಮಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ನಅಇ 61 ಬೆಂಭೂಸ್ವಾ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2271
2. ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಶಂಕರರೆಡ್ಡಿ ಎನ್.ಹೆಚ್. (ಗೌರಿಬಿದನೂರು)
3. ಉತ್ತರಿಸುವ ದಿನಾಂಕ : 23-3-2021
4. ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗೌರಿಬಿದನೂರು ತಾಲ್ಲೂಕು ರಾಜ್ಯ ಹೆದ್ದಾರಿ-9ರಲ್ಲಿ ಸಂಚಾರ ದಟ್ಟಣೆ ಹೆಚ್ಚಾಗಿದ್ದು, ಈ ದಾರಿಯಲ್ಲಿ ತೊಂಡೆಭಾವಿ ಔಟ್‌ಪೋಸ್ಟ್ ಸ್ಟೇಷನ್ ಇರುವುದು ನಿಜವಲ್ಲವೇ; | ಗೌರಿಬಿದನೂರು ತಾಲ್ಲೂಕು ರಾಜ್ಯ ಹೆದ್ದಾರಿ-9ರಲ್ಲಿ ಮಂಚೇನಹಳ್ಳಿ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ತೊಂಡೆಬಾವಿ ಔಟ್‌ಪೋಸ್ಟ್ ಕಾರ್ಯನಿರ್ವಹಿಸುತ್ತಿರುತ್ತದೆ. |
| (ಆ) | ಸದರಿ ಠಾಣೆಯನ್ನು ಮೇಲ್ದರ್ಜೆಗೇರಿಸಲು ಈ ಹಿಂದೆ ಪ್ರಸ್ತಾಪಿಸಿದ್ದು, ಎಲ್ಲಾ ಅರ್ಹತಾ ಮಾನದಂಡಗಳನ್ನು ಹೊಂದಿರುವುದಾಗಿ ವರದಿ ನೀಡಿರುವುದು ನಿಜವೇ; | ತೊಂಡೇಭಾವಿ ಪೊಲೀಸ್ ಠಾಣೆಯನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ರಾಷ್ಟ್ರೀಯ ಪೊಲೀಸ್ ಆಯೋಗದ ಮಾರ್ಗಸೂಚಿಯನ್ವಯ ನಿಗದಿಪಡಿಸಲಾದ ಮಾನದಂಡಗಳನ್ನು ಭಾಗಶ: ಪೂರೈಸಿರುತ್ತದೆ. |
| (ಇ) | ಈ ಠಾಣೆಯನ್ನು ಮೇಲ್ದರ್ಜೆಗೇರಿಸಿ ಪೂರ್ಣ ಪ್ರಮಾಣದ ಠಾಣೆಯನ್ನಾಗಿ ಮಾಡಲು ಸರ್ಕಾರ ಕ್ರಮ ವಹಿಸಲು ಸಾಧ್ಯವಾಗುವುದಿಲ್ಲವೇ? (ವಿವರ ನೀಡುವುದು) | ಪ್ರಸ್ತಾವನೆಯನ್ನು ಪರಿಶೀಲಿಸಲಾಗುವುದು. |

**ಸಂಖ್ಯೆ:ಹೆಚ್‌ಡಿ 52 ಪಿಓಪಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

07

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3273
ಸದಸ್ಯರ ಹೆಸರು : ಶ್ರೀ ರಾಮಪ್ಪ ಎಸ್.(ಹರಿಹರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹರಿಹರ ತಾಲ್ಲೂಕಿನಲ್ಲಿರುವ 17 ಕೆರೆಗಳಿಗೆ ಭದ್ರಾ ನದಿಯಿಂದ ನೀರು ತುಂಬಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಈ 17 ಕೆರೆಗಳಿಗೆ ನೀರು ತುಂಬಿಸುವ ಪ್ರಕ್ರಿಯೆ ಪ್ರಾರಂಭವಾಗಿದೆಯೇ; | ಹರಿಹರ ತಾಲ್ಲೂಕಿನ 17 ಕೆರೆಗಳ ಪೈಕಿ ಕೋಮಾರನಹಳ್ಳಿ ಕೆರೆಗೆ ತುಂಗಭದ್ರಾ ನದಿಯಿಂದ ನೀರು ತುಂಬಿಸಲು ಈಗಾಗಲೇ ರೂ.48.00 ಕೋಟಿ ಅಂದಾಜಿನಲ್ಲಿ ಕೈಗೊಂಡಿರುವ ಬೆನಕನಹಳ್ಳಿ ಮತ್ತು ಇತರೆ 19 ಕೆರೆ ತುಂಬಿಸುವ ಯೋಜನೆಯಡಿ ಸೇರ್ಪಡೆಗೊಂಡಿದ್ದು, ಸದರಿ ಯೋಜನೆಯ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ.<br><br>ಇನ್ನುಳಿದ 16 ಕೆರೆಗಳಿಗೆ ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಕಾಮಗಾರಿಯ ಕಾರ್ಯಸಾಧ್ಯತೆ ಬಗ್ಗೆ ಕರ್ನಾಟಕ ನೀರಾವರಿ ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಇ) | ಈ ಕಾಮಗಾರಿಗೆ ತಗಲುವ ಅಂದಾಜು ವೆಚ್ಚ ಎಷ್ಟು? | |

ಸಂಖ್ಯೆ:ಜಸಂಇ 90 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

(68)

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3277 |
| 2 | ಸದಸ್ಯರ ಹೆಸರು | : | ಶ್ರೀ ಮಂಜುನಾಥ ಆರ್ (ದಾಸರಹಳ್ಳಿ) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಾಸರಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶೇಕಡಾ 95 ರಷ್ಟು ನಿವೇಶನಗಳು /ಬಡಾವಣೆಗಳು ಅನುಮೋದನೆ ಇಲ್ಲದೆ ಬಡಾವಣೆಗಳಾಗಿ ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದಾಸರಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ನಿವೇಶನಗಳು/ ಬಡಾವಣೆಗಳು ಅನುಮೋದನೆ ಇಲ್ಲದೇ ಬಡಾವಣೆಗಳಾಗಿ ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಸದರಿ ಬಡಾವಣೆಗಳ ನಿವೇಶನಗಳು ಹಾಗೂ ಕಟ್ಟಡಗಳಿಗೆ ಪರವಾನಗಿ ಪತ್ರ ಹಾಗೂ ನಕ್ಷೆ ಮಂಜೂರಾತಿ ಪತ್ರ ನೀಡಲು ಕಾನೂನಿನಲ್ಲಿ ತೊಡಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿಬಿಎಂಪಿ) ವತಿಯಿಂದ ಸ್ವಾಧೀನ ಪ್ರಮಾಣಪತ್ರ (Occupancy Certificate) ನೀಡದಿರಲು ಕಾರಣವೇನು; | ಸರ್ಕಾರದ ಗಮನಕ್ಕೆ ಬಂದಿದೆ.<br><br>ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ನೀಡಿರುವ ನಿವೇಶನಗಳು ಹಾಗೂ ಕಟ್ಟಡಗಳಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕಟ್ಟಡ ಉಪವಿಧಿ-2003 ಮತ್ತು ಪರಿಷ್ಕೃತ ಮಾಸ್ಟರ್ ಪ್ಲಾನ್ -2015 ರನ್ವಯ ಕಟ್ಟಡಗಳಿಗೆ ನಕ್ಷೆ ಮಂಜೂರಾತಿ ಮತ್ತು ಸ್ವಾಧೀನಾನುಭವ ಪ್ರಮಾಣ ಪತ್ರ (Occupancy Certificate) ನೀಡಲಾಗುತ್ತಿದ್ದು, ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯನ್ನು ಕೆಲವು ಬಡಾವಣೆಗಳು ಪಡೆಯದೇ ಇರುವ ಕಾರಣದಿಂದ ಸದರಿ ಬಡಾವಣೆಗಳಲ್ಲಿ ಬರುವ ನಿವೇಶನ/ ಕಟ್ಟಡಗಳಿಗೆ ನಕ್ಷೆ ಮಂಜೂರಾತಿ ಮತ್ತು ಸ್ವಾಧೀನಾ ಪ್ರಮಾಣ ಪತ್ರವನ್ನು (Occupancy Certificate) ನೀಡಲಾಗುತ್ತಿರುವುದಿಲ್ಲ. |
| ಇ) | ಬಿಬಿಎಂಪಿ ವತಿಯಿಂದ ಸ್ವಾಧೀನ ಪ್ರಮಾಣಪತ್ರ (Occupancy Certificate) ನೀಡದಿದ್ದಲ್ಲಿ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (BWSSB) ವತಿಯಿಂದ (O.C) ಪತ್ರ ಇಲ್ಲವೆಂದು ಹೆಚ್ಚುವರಿ ಶುಲ್ಕ ವಸೂಲಾತಿ ಮಾಡುತ್ತಿರುವುದರ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ; | ಬೆಂಗಳೂರು ಜಲಮಂಡಳಿಯ ವಿನಿಯಮ 5.4 Production of Occupancy Certificate ರ ಅನ್ವಯ ನೆಲ ಹಾಗೂ ಎರಡು ಮಹಡಿ ಮೇಲ್ಪಟ್ಟಂತಹ ಎಲ್ಲಾ ಕಟ್ಟಡಗಳಿಗೆ ನೀರು ಹಾಗೂ ಒಳಚರಂಡಿ ಸಂಪರ್ಕ ಪಡೆಯಲು ಸ್ವಾಧೀನ ಪತ್ರವನ್ನು ಸಲ್ಲಿಸುವುದು ಕಡ್ಡಾಯ ಮಾಡಲಾಗಿರುತ್ತದೆ. ಮುಂದುವರೆದು, ಸ್ವಾಧೀನ ಪತ್ರವನ್ನು ಸಲ್ಲಿಸದೇ ಇರುವಂತಹ ಸಂಪರ್ಕಗಳಿಗೆ ಈ ಕೆಳಕಂಡಂತೆ ಹೆಚ್ಚುವರಿ ಶುಲ್ಕವನ್ನು ನೀರಿನ ಬಿಲ್ಲಿನಲ್ಲಿ ವಿಧಿಸಲಾಗುತ್ತಿದೆ. |

...2.

| | | |
|---|---|---|
| | | ಗೃಹೇತರ ಸಂಪರ್ಕಗಳಿಗೆ ಬೆಂಗಳೂರು ಜಲಮಂಡಳಿಯ ವಿನಿಯಮ 5.4c ರಂತೆ 100% ನೀರು ಮತ್ತು ಒಳಚರಂಡಿ ಶುಲ್ಕವನ್ನು ಹೆಚ್ಚುವರಿಯಾಗಿ ನೀರಿನ ಬಿಲ್ಲಿನಲ್ಲಿ ವಿಧಿಸಲಾಗುತ್ತಿದೆ.<br>ಗೃಹ ಸಂಪರ್ಕಗಳಿಗೆ ಬೆಂಗಳೂರು ಜಲಮಂಡಳಿಯ ವಿನಿಯಮ 5.4b ರಂತೆ 50% ನೀರು ಮತ್ತು ಒಳಚರಂಡಿ ಶುಲ್ಕವನ್ನು ಹೆಚ್ಚುವರಿಯಾಗಿ ನೀರಿನ ಬಿಲ್ಲಿನಲ್ಲಿ ವಿಧಿಸಲಾಗುತ್ತಿದೆ. |
| ಈ) | ಮಾನ್ಯ ಆಯುಕ್ತರು (ಬಿಬಿಎಂಪಿ) ಹಾಗೂ ಮಾನ್ಯ ಅಧ್ಯಕ್ಷರು (BWSSB) ಇವರುಗಳು ಸ್ವಾಧೀನ ಪ್ರಮಾಣ ಪತ್ರದ ವಿಚಾರವಾಗಿ ಗೊಂದಲ ನಿವಾರಿಸಲು ನಗರಾಭಿವೃದ್ಧಿ ಇಲಾಖೆಯ ಮಧ್ಯಸ್ಥಿಕೆಯಲ್ಲಿ ಕ್ರಮ ಕೈಗೊಂಡಿರುವುದು ನಿಜವೇ? (ವಿವರ ನೀಡುವುದು) | ಈ ಬಗ್ಗೆ ಸರ್ಕಾರದ ಮಟ್ಟದಲ್ಲಿ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

**ನಅಇ 141 ಎಂಎಸ್‌ಯು 2021**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

10

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3394
2. ಮಾನ್ಯ ಸದಸ್ಯರ ಹೆಸರು : ಶ್ರೀ ಶ್ರೀನಿವಾಸಮೂರ್ತಿ ಕೆ. ಡಾ: (ನೆಲಮಂಗಲ)
3. ಉತ್ತರಿಸುವ ದಿನಾಂಕ : 23-3-2021
4. ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನೆಲಮಂಗಲ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಗೃಹ ಇಲಾಖೆಯಿಂದ ಪೊಲೀಸ್ ಠಾಣೆಗಳ ಅಭಿವೃದ್ಧಿಗೆ ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಬಿಡುಗಡೆ ಮಾಡಿದ ಅನುದಾನವೆಷ್ಟು; (ವಿವರ ನೀಡುವುದು) | ನೆಲಮಂಗಲ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನೆಲಮಂಗಲ ಟೌನ್, ನೆಲಮಂಗಲ ಗ್ರಾಮಾಂತರ, ನೆಲಮಂಗಲ ಸಂಚಾರ, ತ್ಯಾಮಗೊಂಡ್ಲು ಮತ್ತು ದಾಬಸ್‌ಪೇಟೆ ಪೊಲೀಸ್ ಠಾಣೆಗಳು ಬರಲಿದ್ದು, ಈ ಪೊಲೀಸ್ ಠಾಣೆಗಳಲ್ಲಿ ಅಗತ್ಯ ಮೂಲಭೂತ ಸೌಲಭ್ಯಗಳ ವ್ಯವಸ್ಥೆ ಇರುತ್ತದೆ. |
| (ಆ) | ಈ ಕ್ಷೇತ್ರದಲ್ಲಿ ಮಹಿಳಾ ಪೊಲೀಸ್ ಠಾಣೆ ನಿರ್ಮಾಣ ಮಾಡುವ ಉದ್ದೇಶ ಸರ್ಕಾರಕ್ಕೆ ಇದೆಯೇ; | ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ/124/ಪಿಒಪಿ/2016, ದಿ:12/5/2016ರಲ್ಲಿ ಪ್ರತಿ ಜಿಲ್ಲೆಯಲ್ಲಿ ಒಂದು ಮಹಿಳಾ ಪೊಲೀಸ್ ಠಾಣೆಯು ಕಾರ್ಯನಿರ್ವಹಿಸಬೇಕೆಂದು ಆದೇಶವಾಗಿದ್ದು, ಅದರಂತೆ, ಬೆಂಗಳೂರು ಜಿಲ್ಲೆಗೆ ಸೃಜನೆಯಾಗಿರುವ ಮಹಿಳಾ ಪೊಲೀಸ್ ಠಾಣೆಯು ಈಗಾಗಲೇ ದೊಡ್ಡಬಳ್ಳಾಪುರ ನಗರದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ನೆಲಮಂಗಲ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರತ್ಯೇಕವಾಗಿ ಮಹಿಳಾ ಪೊಲೀಸ್ ಠಾಣೆ ತೆರೆಯುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗುವುದು. |
| (ಇ) | ಹಾಗಿದ್ದಲ್ಲಿ, ಮಹಿಳಾ ಪೊಲೀಸ್ ಠಾಣೆಯನ್ನು ಪ್ರಾರಂಭ ಮಾಡಲು ಪ್ರಸಕ್ತ ಸಾಲಿನಲ್ಲಿ ಅನುದಾನ ಮಂಜೂರು ಮಾಡಲಾಗುವುದೇ; | |
| (ಈ) | ಈ ಕ್ಷೇತ್ರದಲ್ಲಿ ಪೊಲೀಸ್ ಠಾಣೆಗಳಿಗೆ ಸ್ವಂತ ಕಟ್ಟಡವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ನೆಲಮಂಗಲ ವಿಧಾನ ಸಭಾ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿರುವ 05 ಪೊಲೀಸ್ ಠಾಣೆಗಳಲ್ಲಿ ನೆಲಮಂಗಲ ಸಂಚಾರ ಪೊಲೀಸ್ ಠಾಣೆಯು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಹಾಗೂ ನೆಲಮಂಗಲ ಗ್ರಾಮಾಂತರ ಪೊಲೀಸ್ ಠಾಣೆಯು ವಾಣಿಜ್ಯ ಇಲಾಖೆಗೆ ಸೇರಿದ ಬಾಡಿಗೆ ರಹಿತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಉಳಿದಂತೆ ನೆಲಮಂಗಲ ಟೌನ್ ಪೊಲೀಸ್ ಠಾಣೆ, ತ್ಯಾಮಗೊಂಡ್ಲು ಪೊಲೀಸ್ ಠಾಣೆ ಹಾಗೂ ದಾಬಸ್‌ಪೇಟೆ ಪೊಲೀಸ್ ಠಾಣೆಯು ಸ್ವಂತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ. |
| (ಉ) | ಸಂಚಾರಿ ಪೊಲೀಸ್ ಠಾಣೆಗೆ ನೂತನ ಕಟ್ಟಡ ನಿರ್ಮಾಣ ಮಾಡಲು ಸ್ಥಳವನ್ನು ಗುರುತಿಸಲಾಗಿದೆಯೇ; (ವಿವರ ನೀಡುವುದು) | ನೆಲಮಂಗಲ ಸಂಚಾರ ಪೊಲೀಸ್ ಠಾಣೆಗೆ ನೂತನ ಕಟ್ಟಡ ನಿರ್ಮಾಣ ಸಂಬಂಧ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ನೆಲಮಂಗಲ ತಾ॥ ವಿಶ್ವೇಶ್ವರ ಗ್ರಾಮ ಪಂಚಾಯಿತಿಯ ಖಾಲಿ ಕಟ್ಟಡ ಹಾಗೂ ಸುತ್ತಮುತ್ತಲಿನ ಜಾಗವನ್ನು ನೆಲಮಂಗಲ ಸಂಚಾರ ಪೊಲೀಸ್ ಠಾಣೆಯ ಸುಪರ್ದಿಗೆ ನೀಡುವಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರೊಂದಿಗೆ, ತಹಸೀಲ್ದಾರ್, ನೆಲಮಂಗಲ ತಾಲ್ಲೂಕು, ಗ್ರಾಮ ಪಂಚಾಯಿತಿ ಅಧ್ಯಕ್ಷರೊಂದಿಗೆ ಮತ್ತು ಸದಸ್ಯ ಕಾರ್ಯದರ್ಶಿ, ನೆಲಮಂಗಲ ಯೋಜನಾ ಪ್ರಾಧಿಕಾರ ರವರಿಗೆ ಪತ್ರ ವ್ಯವಹಾರ ಮಾಡಿರುತ್ತಾರೆ. |

| | | |
|---|---|---|
| (ಊ) | ಪೊಲೀಸ್ ಠಾಣೆಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? | ಬಾಡಿಗೆ ಹಾಗೂ ಇತರೆ ಸರ್ಕಾರಿ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪೊಲೀಸ್ ಠಾಣೆಗಳಿಗೆ ನೂತನ ಕಟ್ಟಡ ನಿರ್ಮಾಣ ಸಂಬಂಧ ಜಮೀನಿನ ಲಭ್ಯತೆ ಹಾಗೂ ಅನುದಾನದ ಲಭ್ಯತೆ ಮೇರೆಗೆ ಕ್ರಮ ಕೈಗೊಳ್ಳಲು ಪರಿಶೀಲಿಸಲಾಗುವುದು. |

**ಸಂಖ್ಯೆ:ಹೆಚ್‌ಡಿ 34 ಪಿಓಪಿ 2021**

**(ಬಸವರಾಜ ಬೊಮ್ಮಾಯಿ)**
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

11

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 3311 |
| ಸದಸ್ಯರ ಹೆಸರು | : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸುವ ದಿನಾಂಕ | : 23.03.2021 |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಗುತ್ತಿ ಬಸವಣ್ಣ ಏತ ನೀರಾವರಿ (ಐ.ಎಲ್.ಸಿ) ಕಿ.ಮೀ.0.00 ರಿಂದ 203.00 ರವರೆಗೆ ಕಾಲುವೆಯ ಕಾಮಗಾರಿಯು ಪೂರ್ಣಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-2ರಡಿ ಇಂಡಿ ಏತ ನೀರಾವರಿ (ಗುತ್ತಿ ಬಸವಣ್ಣ) ಕಿ.ಮೀ.0.00 ರಿಂದ 97.30 ಕಾಮಗಾರಿ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿ ಇಂಡಿ ಏತ ನೀರಾವರಿ ಕಾಲುವೆ ಕಿ.ಮೀ. 97.30 ರಿಂದ 147.00 ವರೆಗಿನ ವಿಸ್ತರಣೆ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.<br><br>ಸದರಿ ಇಂಡಿ ಏತ ನೀರಾವರಿ ಕಾಲುವೆಯ 147.00 ಕಿ.ಮೀ. ನಂತರ ಟೇಲ್ ಎಂಡ್ ವಿತರಣಾ ಕಾಲುವೆ ಸಂಖ್ಯೆ:59 ಕಿ.ಮೀ 0.00 ರಿಂದ ಕಿ.ಮೀ. 32.527 ರವರೆಗಿನ ನಿರ್ಮಾಣ ಕಾಮಗಾರಿ ಪ್ರಗತಿಯ ವಿವಿಧ ಹಂತದಲ್ಲಿದೆ. ಸದರಿ ವಿತರಣಾ ಕಾಲುವೆ ಸಂಖ್ಯೆ:59ರ ಕಿ.ಮೀ. 32.527 ನಂತರ ಟೇಲ್ ಆಫ್ ಡಿಸ್ಟ್ರಿಬ್ಯೂಟರಿ 59 (ಕಿ.ಮೀ. 32.527 ರಿಂದ ಕಿ.ಮೀ. 55.04 ರವರೆಗೆ) ಆಗಿ ಮುಂದುವರೆದು ಅಂಜುಟಗಿ ಗ್ರಾಮದ ಹತ್ತಿರ ಕಲ್ಲಹಳ್ಳಕ್ಕೆ ಮುಕ್ತಾಯಗೊಳ್ಳಲಿದ್ದು, ಸದರಿ ಸರಪಳಿಯ ನಿರ್ಮಾಣ ಕಾಮಗಾರಿಯನ್ನು ಎರಡು ಪ್ಯಾಕೇಜ್‌ಗಳಡಿ ಕೈಗೆತ್ತಿಕೊಂಡಿದ್ದು ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿರುತ್ತವೆ. |
| ಆ) | ಬಂದಿದ್ದಲ್ಲಿ, ಸದರಿ ಕಾಲುವೆಯಲ್ಲಿ ಕಿ.ಮಿ.97.00 ರವರೆಗೆ ಮಾತ್ರ ನೀರು ಹರಿಯುತ್ತಿದ್ದು, ನಾಲೆಯ ಮುಂದಿನ ಭಾಗದವರೆಗೆ ನೀರು ಹರಿಯದೇ ಇರುವುದರಿಂದ ರೈತರು ತೀವ್ರ ಕಷ್ಟಕರ ಪರಿಸ್ಥಿತಿಯನ್ನು ಎದುರಿಸುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ; | ಇಂಡಿ ಏತ ನೀರಾವರಿ ಕಾಲುವೆ ಕಿ.ಮೀ. 97.30 ರಿಂದ 147.00 ವರೆಗಿನ ವಿಸ್ತರಣೆ ಯೋಜನೆಯು ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ರಡಿಯ ಒಂದು ಉಪಯೋಜನೆ ಆಗಿದ್ದು, ಸದರಿ ಯೋಜನೆಯಡಿಯ ನೀರಿನ ಬಳಕೆಯು ಕೃಷ್ಣಾ ನ್ಯಾಯಾಧೀಕರಣ-2 ರ ಅಂತಿಮ ತೀರ್ಪು ಅಧಿಸೂಚನೆಗೆ ಒಳಪಟ್ಟಿದ್ದು, ಇನ್ನೂ ಗೆಜೆಟ್ ಅಧಿಸೂಚನೆ ಗೊಂಡಿರುವುದಿಲ್ಲ. ಆದಾಗ್ಯೂ, ಪ್ರಸ್ತುತ ಈಗಾಗಲೇ ಹಂಚಿಕೆಯಾದ ನೀರಿನ ಪ್ರಮಾಣದಲ್ಲಿಯೇ ಪ್ರಸ್ತುತ ಪೂರ್ಣಗೊಂಡಿರುವ ಇಂಡಿ ಏತ ನೀರಾವರಿ ಮುಖ್ಯ ಕಾಲುವೆ ವಿಸ್ತರಣೆ ಕಿ.ಮೀ.97.30 ದಿಂದ ಕಿ.ಮೀ.147.00 ವರೆಗಿನ ಕಾಲುವೆ ಜಾಲದಡಿ ಪ್ರಾಯೋಗಿಕವಾಗಿ (On Trial Basis) ನೀರು ಹರಿಬಿಡಲಾಗಿರುತ್ತದೆ.<br><br>ಅಲ್ಲದೇ, ಕೃಷ್ಣಾ ನ್ಯಾಯಾಧಿಕರಣ-2ರ ಅಂತಿಮ ತೀರ್ಪನ್ನು ಕೇಂದ್ರ ಸರ್ಕಾರದಿಂದ ಅಧಿಸೂಚನೆಯನ್ನು ತ್ವರಿತವಾಗಿ ಹೊರಡಿಸಲು ಕೇಂದ್ರ ಸರ್ಕಾರದೊಂದಿಗೆ ಸಮನ್ವಯ ಸಾಧಿಸಿ, ಪ್ರಕ್ರಿಯೆ ತ್ವರಿತಗೊಳಿಸಲು ಎಲ್ಲಾ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಸದರಿ ಕಾಲುವೆಯ ಕಿ.ಮಿ.97.00 ರಿಂದ 203.00 ರವರೆಗೆ ಕಾಲುವೆಯಲ್ಲಿ ನೀರು ಹರಿಸದಿರಲು ಕಾರಣಗಳೇನು; | |
| ಈ) | ಸದರಿ ಕಾಲುವೆಯಲ್ಲಿ ಕಿ.ಮಿ.203.00 ರವರೆಗೆ ನೀರು ಹರಿಸಲು ಸರ್ಕಾರ ಆಸಕ್ತಿ ಹೊಂದಿದೆಯೇ; | |
| ಉ) | ಹೊಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು (ವಿವರ ನೀಡುವುದು) | |
| ಊ) | ಸದರಿ ಕಾಲುವೆಯ ಕಿ.ಮಿ.203.00 ರವರೆಗೆ ಕಾಲುವೆಯಲ್ಲಿ ನೀರು ಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ: ಜಸಂಇ 54 ಡಬ್ಲ್ಯೂಬಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3428
2. ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ.ಟಿ.,
3. ಉತ್ತರಿಸಬೇಕಾದ ದಿನಾಂಕ : 23.03.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದಲ್ಲಿ 208–19 ರಿಂದ 2020–21 ನೇ ಸಾಲಿನವರೆಗೆ ಅಭಿವೃದ್ಧಿ ಗೊಂಡಿರುವ ಚೆಕ್ ಡ್ಯಾಂ ಕಾಮಗಾರಿಗಳಾವುವು (ವರ್ಷವಾರು ವಿವರವನ್ನು ನೀಡುವುದು) | ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದಲ್ಲಿ 2018–19 ರಿಂದ 2020–21 ನೇ ಸಾಲಿನವರೆಗೆ ಚೆಕ್ ಡ್ಯಾಂ ಅಭಿವೃದ್ಧಿ ಪಡಿಸುವ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. ಆದ್ದರಿಂದ ಚೆಕ್ ಡ್ಯಾಂ ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ) | ಸದರಿ ಕಾಮಗಾರಿಗಳಿಗೆ ಯಾವ ಯಾವ ಯೋಜನೆಗಳಲ್ಲಿ ಹಾಗೂ ವಿವಿಧ ಲೆಕ್ಕಶೀರ್ಷಿಕೆಗಳಲ್ಲಿ ಮಂಜೂರಾದ ಅನುದಾನ ಎಷ್ಟು? (ವರ್ಷವಾರು ವಿವರಗಳನ್ನು ನೀಡುವುದು) | ಆದಾಗ್ಯೂ ಈ ಅವಧಿಯಲ್ಲಿ ರೂ.365.00 ಲಕ್ಷ ಅಂದಾಜು ಮೊತ್ತದ 8 ಚೆಕ್ ಡ್ಯಾಂಗಳನ್ನು ಹೊಸದಾಗಿ ನಿರ್ಮಿಸುವ ಕಾರ್ಯವನ್ನು ಕೈಗೊಳ್ಳಲಾಗಿದ್ದು, ಈ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ವಿವರಗಳು ಕೆಳಕಂಡಂತಿವೆ. |

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ವರ್ಷ | ಕಾಮಗಾರಿ ಗಳ ಸಂಖ್ಯೆ | ಅಂದಾಜು ಮೊತ್ತ | ಬಿಡುಗಡೆಯಾದ ಅನುದಾನ | ಹಂತ |
|---|---|---|---|---|---|
| 1 | 2018–19 | 5 | 225.00 | 204.41 | ಪೂರ್ಣ ಗೊಂಡಿವೆ |
| 2 | 2019–20 | 3 | 140.00 | 60.20 | ಪೂರ್ಣ ಗೊಂಡಿವೆ |
| 3 | 2020–21 | – | – | – | – |

ಲೆಕ್ಕ ಶೀರ್ಷಿಕೆವಾರು ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಕಡತ ಸಂಖ್ಯೆ: ಒಕಅ 211 ಐಂಕಿ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.

ಶ್ರೀ ವೆಂಕಟರಮಣಯ್ಯ.ಟಿ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:3428ಕ್ಕೆ ಅನುಬಂಧ

**2018-19 ಹಾಗೂ 2019-20 ನೇ ಸಾಲಿನಲ್ಲಿ ಹೊಸದಾಗಿ ಕೈಗೆತ್ತಿಕೊಂಡ ಚೆಕ್ ಡ್ಯಾಂಗಳ ವಿವರ**

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವರ್ಷ | ಜಿಲ್ಲೆ | ವಿಧಾನಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಬಿಡುಗಡೆಯಾದ ಅನುದಾನ | ಒಟ್ಟು ವೆಚ್ಚ | ಕಾಮಗಾರಿಯ ಹಂತ ಪೂರ್ಣಗೊಂಡಿದೆ/ ಪ್ರಗತಿಯಲ್ಲಿದೆ | ಷರಾ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 2018-19 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-101-5-01-139 ಅಣೆಕಟ್ಟು ಮತ್ತು ಪಿಕಪ್ - ಪ್ರಧಾನ ಕಾಮಗಾರಿಗಳು | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಮಧುರೆ ಹೋಬಳಿ ಕನಸವಾಡಿ ಹತ್ತಿರ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ | 50.00 | 57.67 | 57.67 | ಪೂರ್ಣಗೊಂಡಿದೆ. | |
| 2 | 2018-19 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-101-5-01-139 ಅಣೆಕಟ್ಟು ಮತ್ತು ಪಿಕಪ್ - ಪ್ರಧಾನ ಕಾಮಗಾರಿಗಳು | ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಮಧುರ ಹೋಬಳಿ ವೀರಾಪುರ ಹತ್ತಿರ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ | 50.00 | 40.31 | 40.31 | ಪೂರ್ಣಗೊಂಡಿದೆ. | |
| 3 | 2018-19 | ಬೆಂಗಳೂರು (ಗ್ರಾ) ಜಿಲ್ಲೆ | ದೊಡ್ಡಬಳ್ಳಾಪುರ | 4702-00-789-0-01-422 ಎಸ್.ಸಿ.ಪಿ | ಬೆಂಗಳೂರು ಗ್ರಾಮಾಂತರ ದೊಡ್ಡಬಳ್ಳಾಪುರ ತಾಲ್ಲೂಕು ಸಾಸುಲು ಹೋಬಳಿ ಉಜ್ಜನಿ ಗ್ರಾಮದ ಹತ್ತಿರ ಹಳ್ಳಕ್ಕೆ ಎಲ್. ಎಲ್. ಸಿ ಕಂ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 75.00 | 68.00 | 68.00 | ಪೂರ್ಣಗೊಂಡಿದೆ. | |
| 4 | 2018-19 | ಬೆಂಗಳೂರು (ಗ್ರಾ) ಜಿಲ್ಲೆ | ದೊಡ್ಡಬಳ್ಳಾಪುರ | 4702-00-789-0-01-422 ಎಸ್.ಸಿ.ಪಿ | ಬೆಂಗಳೂರು ಗ್ರಾಮಾಂತರ ದೊಡ್ಡಬಳ್ಳಾಪುರ ತಾಲ್ಲೂಕು ದೊಡ್ಡಬೆಲವಂಗಲ ಹೋಬಳಿ ಅಡಕವಾಳ ಗ್ರಾಮದ ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 25.00 | 21.45 | 21.45 | ಪೂರ್ಣಗೊಂಡಿದೆ. | |
| 5 | 2018-19 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-796-0-01-423 ಟಿ.ಎಸ್.ಪಿ | ಬೆಂಗಳೂರು ಗ್ರಾಮಾಂತರ ದೊಡ್ಡಬಳ್ಳಾಪುರ ತಾಲ್ಲೂಕು ದೊಡ್ಡಬೆಲವಂಗಲ ಹೋಬಳಿ ಕೋಲಿಗೆರೆ ಗ್ರಾಮದ ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 25.00 | 16.98 | 16.98 | ಪೂರ್ಣಗೊಂಡಿದೆ. | |
| 6 | 2019-20 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-789-0-01-422 ಎಸ್.ಸಿ.ಪಿ | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಶಿರಗೊಂಡನಹಳ್ಳಿ ಎಸ್.ಸಿ ಜಮೀನಿನ ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ | 50 | 35.18 | 35.18 | ಪೂರ್ಣಗೊಂಡಿದೆ | |
| 7 | 2019-20 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-789-0-01-422 ಎಸ್.ಸಿ.ಪಿ | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಗುಂಡಲಹಳ್ಳಿ ಎಸ್.ಸಿ ಜಮೀನಿನ ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ | 50 | 25.02 | 25.02 | ಪೂರ್ಣಗೊಂಡಿದೆ | |
| 8 | 2019-20 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 4702-00-796-0-01-423 ಟಿ.ಎಸ್.ಪಿ | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ಮಲ್ಲಸಂದ್ರ ಹತ್ತಿರ ಎಸ್.ಟಿ. ಜಮೀನಿನ ಹತ್ತಿರ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ | 40.00 | 0 | 0 | ಪೂರ್ಣಗೊಂಡಿದೆ | |
| | | | | | ಒಟ್ಟು | 365.00 | 264.61 | 264.61 | | |

(13)

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3341
2. ಸದಸ್ಯರ ಹೆಸರು : ಶ್ರೀ ರಾಮಲಿಂಗಾ ರೆಡ್ಡಿ (ಬಿ.ಟಿ.ಎಂ. ಲೇಔಟ್)
3. ಉತ್ತರಿಸಬೇಕಾದ ದಿನಾಂಕ : 23-03-2021
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

| ಸಂ | ಪ್ರಶ್ನೆ | ಉತ್ತರ |
|---|---|---|
| ಅ) | "ನಮ್ಮ ಮೆಟ್ರೋ" ರೈಲಿನಲ್ಲಿ ಪ್ರಯಾಣಿಕರ ಅನುಕೂಲಕ್ಕಾಗಿ ಹಣ ನೀಡಿ ಟೋಕನ್ ಪಡೆದುಕೊಂಡು ಪ್ರಯಾಣಿಸುವ ಸೌಲಭ್ಯವನ್ನು ನಿಲ್ಲಿಸಲಾಗಿದೆಯೇ; | "ನಮ್ಮ ಮೆಟ್ರೋ" ದಲ್ಲಿನ ಟೋಕನ್ ವ್ಯವಸ್ಥೆಯನ್ನು ಸ್ಥಗಿತಗೊಳಿಸಿರುವುದಿಲ್ಲ. ಕೋವಿಡ್-19 ಸಾಂಕ್ರಾಮಿಕ ರೋಗದ ಹಿನ್ನಲೆಯಲ್ಲಿ ಪ್ರಯಾಣಿಕರು ಈ ಟೋಕನ್‌ಗಳನ್ನು ಮರುಬಳಕೆ ಮಾಡಿದರೆ ಈ ಸಾಂಕ್ರಾಮಿಕ ರೋಗದ ಹರಡುವಿಕೆಯು ಹೆಚ್ಚುವುದರಿಂದ ಈ ವ್ಯವಸ್ಥೆಯನ್ನು ತಾತ್ಕಾಲಿಕವಾಗಿ ಹಿಂತೆಗೆದುಕೊಳ್ಳಲಾಗಿರುತ್ತದೆ. |
| ಆ) | ಇದರಿಂದ ಬಡವರಿಗೆ ಹಾಗೂ ಮಧ್ಯಮ ವರ್ಗಗಳ ಪ್ರಯಾಣಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಯಾಣಿಕರಿಗೆ ಸ್ಮಾರ್ಟ್ ಕಾರ್ಡ್‌ಗಳ ಮೂಲಕ ಪ್ರಯಾಣಿಸಲು ಬಿಎಂಆರ್‌ಸಿಎಲ್ ಅನುಮತಿ ನೀಡಿದ್ದು, ಇದಕ್ಕೆ ಶೇ.5% ರಿಯಾಯಿತಿ ನೀಡಲಾಗಿದೆ. ಆದ್ದರಿಂದ, ರಿಯಾಯಿತಿ ಕಾರ್ಡ್-ನಿಂದ ಪ್ರಯಾಣಿಕರಿಗೆ ಹೆಚ್ಚಿನ ಸಹಾಯವಾಗುತ್ತಿದೆ. |
| ಇ) | ಹಾಗಿದ್ದಲ್ಲಿ, ಟೋಕನ್ ನೀಡುವ ಪದ್ಧತಿಯನ್ನು ಪುನರ್ ಜಾರಿಗೆ ತರಲು ಸರ್ಕಾರ ಕ್ರಮಕೈಗೊಳ್ಳುತ್ತದೆಯೇ (ವಿವರ ನೀಡುವುದು) | ಕೋವಿಡ್-19 ನಿಂದ ಉಂಟಾದ ಪರಿಸ್ಥಿತಿಯು ಇನ್ನೂ ಕಡಿಮೆಯಾಗಿರುವುದಿಲ್ಲ. ಆದ್ದರಿಂದ, ಒಮ್ಮೆ ಸಾಂಕ್ರಾಮಿಕ ರೋಗದ ಪರಿಸ್ಥಿತಿಯು ಸುಧಾರಿಸಿದ ನಂತರ ಟೋಕನ್ ವ್ಯವಸ್ಥೆಯನ್ನು ಮರುಜಾರಿಗೊಳಿಸುವ ಬಗ್ಗೆ ಸೂಕ್ತವಾಗಿ ನಿರ್ಧರಿಸಲಾಗುವುದು. |

ಇ.ಕಡತ ಸಂಖ್ಯೆ : ನಅಇ 79 ಪಿ.ಆರ್.ಜೆ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು

## KARNATAKA LEGISLATIVE ASSEMBLY

| | | | |
|---|---|---|---|
| 1 | Starred Question No | : | 3341 |
| 2 | Name of the Member | : | Sri Ramalinga Reddy (BTM Layout) |
| 3 | Date of Reply | : | 23-03-2021 |
| 4 | To be Replied by | : | Chief Minister |

| Sl. No | Question | Answer |
|---|---|---|
| a) | Whether the facility provided to the commuters to get tokens by paying money to travel in "Namma Metro" has been stopped? M | Token system of "Namma Metro" is not terminated. It has been withdrawn temporarily in the background of Covid-19 pandemic, as re-usage of tokens by the commuters will result in increase of pandemic. |
| b) | Whether it has come to the notice of the Government that, it has effected the poor and the middle class commuters; | BMRCL has permitted commuters to travel by smart cards, which is provided with 5% discount. Hence, discounted travel card is helping the commuters at large. |
| c) | If so, whether the Government will re-introduce token system again? | Situation arising out of Covid-19 is not yet subsided. Once the pandemic situation comes under control, appropriate decision will be taken to re-introduce the token system. |

File No: UDD 79 PRJ 2021

Sd/-
**(B.S. YEDIYURAPPA)**
Chief Minister.

ಕರ್ನಾಟಕ ವಿಧಾನ ಸಭೆ

(1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3438

(2) ಮಾನ್ಯ ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

(3) ಉತ್ತರಿಸಬೇಕಾದ ದಿನಾಂಕ : 23.03.2021

(4) ಉತ್ತರಿಸುವ ಸಚಿವರು : ಮಾನ್ಯ ಗೃಹ ಮತ್ತು ಕಾನೂನು ,ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಬೈಲಹೊಂಗಲ ತಾಲ್ಲೂಕಿನಲ್ಲಿ ಬರುವ ದೊಡವಾಡ ಪೊಲೀಸ್ ಠಾಣೆಯ ಮೊಕದ್ದಮೆ (ದಾವೆ)ಗಳನ್ನು ಪ್ರಸ್ತುತ ಬೈಲಹೊಂಗಲ ತಾಲ್ಲೂಕು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿಯೇ ಪರಿಹರಿಸಲಾಗುತ್ತಿರುವುದು ನಿಜವಲ್ಲವೇ; | ಹೌದು |
| (ಆ) | ಸದರಿ ಪೊಲೀಸ್ ಠಾಣೆಯಲ್ಲಿ ಬರುವ ಮೊಕದ್ದಮೆ (ದಾವೆ)ಗಳನ್ನು ಬೈಲಹೊಂಗಲ ತಾಲ್ಲೂಕು ಜೆ.ಎಂ.ಎಫ್.ಸಿ. ನ್ಯಾಯಾಲಯದ ಬದಲಾಗಿ ಕಿತ್ತೂರು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ವರ್ಗಾಯಿಸುವ ಪ್ರಸ್ತಾವನೆ ಇರುವುದು ನಿಜವೇ; | ಬೈಲಹೊಂಗಲ ತಾಲ್ಲೂಕಿನಲ್ಲಿರುವ ನ್ಯಾಯಾಲಯಗಳ ಕಾರ್ಯವ್ಯಾಪ್ತಿಯನ್ನು ಬದಲಾಯಿಸುವ ಬಗ್ಗೆ ಯಾವುದೇ ಪ್ರಸ್ತಾವನೆಗಳು ಸ್ವೀಕೃತವಾಗಿರುವುದಿಲ್ಲ. |
| (ಇ) | ಹಾಗಿದ್ದಲ್ಲಿ, ದೊಡವಾಡ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಮೊಕದ್ದಮೆ (ದಾವೆ)ಗಳನ್ನು ಕಿತ್ತೂರು ನ್ಯಾಯಾಲಯಕ್ಕೆ ವರ್ಗಾಯಿಸಿದ್ದಲ್ಲಿ ದೊಡವಾಡ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ಸಾರ್ವಜನಿಕರಿಗೆ ತುಂಬಾ ಅನಾನುಕೂಲವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಉದ್ಭವಿಸುವುದಿಲ್ಲ |
| (ಈ) | ದೊಡವಾಡ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಮೊಕದ್ದಮೆ (ದಾವೆ)ಗಳನ್ನು ಕಿತ್ತೂರು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ವರ್ಗಾಯಿಸದೇ, ಹಾಲಿ ಇರುವಂತೆಯೇ ಬೈಲಹೊಂಗಲ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿಯೇ ಮುಂದುವರಿಸುವಂತೆ ಕೋರಿ ಅಲ್ಲಿನ ಸಾರ್ವಜನಿಕರು ಹಾಗೂ ಈ ಭಾಗದ ಜನಪ್ರತಿನಿಧಿಗಳು ಸರ್ಕಾರಕ್ಕೆ ಮನವಿ ಸಲ್ಲಿಸಿರುವುದು ನಿಜವಲ್ಲವೇ; | ಹೌದು<br><br>ದೊಡವಾಡ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಪ್ರಕರಣಗಳನ್ನು ಕಿತ್ತೂರು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ವರ್ಗಾಯಿಸದೇ ಹಾಲಿ ಇರುವಂತೆಯೇ ಬೈಲಹೊಂಗಲ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿಯೇ ಮುಂದುವರಿಸುವಂತೆ ಮಾನ್ಯ ವಿಧಾನ |

| | | |
|---|---|---|
| ಉ) | ಹಾಗಿದ್ದಲ್ಲಿ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ದೊಡವಾಡ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಮೊಕದ್ದಮೆ (ದಾವೆ)ಗಳನ್ನು ಕಿತ್ತೂರು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ವರ್ಗಾಯಿಸದೇ ಹಾಲಿ ಇರುವಂತೆಯೇ ಬೈಲಹೊಂಗಲ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿಯೇ ಮುಂದುವರೆಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | ಸಭಾ ಸದಸ್ಯರು, ಬೈಲಹೊಂಗಲ ವಿಧಾನಸಭಾ ಮತಕ್ಷೇತ್ರ, ಬೈಲಹೊಂಗಲ ಮತ್ತು ಅಧ್ಯಕ್ಷರು, ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಹಾಗೂ ಮಾಜಿ ಶಾಸಕರು, ಬೈಲಹೊಂಗಲ ವಿಧಾನಸಭಾ ಮತಕ್ಷೇತ್ರ ರವರುಗಳು ಕೋರಿರುತ್ತಾರೆ.<br><br>ಸದರಿ ಪ್ರಸ್ತಾವನೆ ಕುರಿತು ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳುವಂತೆ ಕರ್ನಾಟಕ ಉಚ್ಚ ನ್ಯಾಯಾಲಯವನ್ನು ದಿನಾಂಕ 3.3.2021ರ ಪತ್ರದಲ್ಲಿ ಕೋರಲಾಗಿದೆ.<br><br>ಪ್ರಸ್ತುತ ಸದರಿ ವಿಷಯವು ಕರ್ನಾಟಕ ಉಚ್ಚ ನ್ಯಾಯಾಲಯದ ಪರಿಶೀಲನೆಯಲ್ಲಿದೆ. |

(ಸಂಖ್ಯೆ: ಲಾ-ಎಲ್‌ಸಿಇ/37/2021)

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು ,ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಸಚಿವರು,
ಕರ್ನಾಟಕ ಸರ್ಕಾರ.

## ಕರ್ನಾಟಕ ವಿಧಾನ ಸಭೆ

15

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3422 |
| 2 | ಸದಸ್ಯರ ಹೆಸರು | : | ಶ್ರೀ ರಿಜ್ವಾನ್ ಅರ್ಷದ್ |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶಿವಾಜಿನಗರ ರಸೆಲ್ ಮಾರ್ಕೆಟ್‌ನ ಅಭಿವೃದ್ಧಿ / ಪುನಶ್ಚೇತನಕ್ಕಾಗಿ ಸ್ಮಾರ್ಟ್‌ಸಿಟಿ ಯೋಜನೆಯಡಿ ರೂ. 16.00 ಕೋಟಿ ಅನುದಾನವನ್ನು ಮೀಸಲಿರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮವು, ಸ್ಮಾರ್ಟ್ ಸಿಟಿ ಯೋಜನೆಯ ರಾಜ್ಯ ಮಟ್ಟದ ಉಸ್ತುವಾರಿ ಸಂಸ್ಥೆಯಾಗಿರುತ್ತದೆ. ಬೆಂಗಳೂರು ನಗರವು ಸ್ಮಾರ್ಟ್ ಸಿಟಿ ಯೋಜನೆಯಡಿ ಸಲ್ಲಿಸಿದ್ದ ಮೂಲ ಪ್ರಸ್ತಾವನೆಯಲ್ಲಿ ರಸೆಲ್ ಮಾರುಕಟ್ಟೆ ಅಭಿವೃದ್ಧಿ (ರೂ. 27.32 ಕೋಟಿ) ಹಾಗೂ ಶಿವಾಜಿನಗರ Integrated Mobility Hub ಕಾಮಗಾರಿಗಳಲ್ಲಿ ಸೇರಿಸಲಾಗಿತ್ತು.<br><br>ಆದರೆ, ಬಿ.ಎಂ.ಆರ್.ಸಿ.ಎಲ್., ವತಿಯಿಂದ ಮೆಟ್ರೋ ಕಾಮಗಾರಿ ನಡೆಯುತ್ತಿರುವುದರಿಂದ ಅದರ ವಿನ್ಯಾಸದ ಮೇಲೆ ಕಾಮಗಾರಿಗಳ ಅನುಷ್ಠಾನದ ಕಾರ್ಯ ಸಾಧ್ಯತೆ ಅವಲಂಬಿತವಾಗಿದ್ದ ಕಾರಣ, ಬೆಂಗಳೂರು ಸ್ಮಾರ್ಟ್ ಸಿಟಿ ಪ್ರಸ್ತಾವನೆಯಿಂದ ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ಮಂಡಳಿಯ ಅನುಮೋದನೆ ಪಡೆದು ಮೇಲಿನ ಎರಡು ಕಾಮಗಾರಿಗಳನ್ನು ಕೈಬಿಡಲಾಗಿರುತ್ತದೆ. ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ದಿನಾಂಕ: 23-12-2019 ರಂದು ನಡೆದ 8ನೇ ನಿರ್ದೇಶಕರ ಮಂಡಳಿ ಸಭೆಯಲ್ಲಿ ಈ ಕಾಮಗಾರಿಗಳನ್ನು ಕೈಬಿಟ್ಟು ಇದರ ಬದಲಿಗೆ ರೂ. 3.82 ಕೋಟಿ ವೆಚ್ಚದಲ್ಲಿ ಶಿವಾಜಿನಗರ ಬಸ್ ಟರ್ಮಿನಲ್ ಪುನರ್ ಅಭಿವೃದ್ಧಿ ಯೋಜನೆಯನ್ನು ತೆಗೆದುಕೊಳ್ಳಲು ಅನುಮೋದನೆ ಪಡೆಲಾಗಿರುತ್ತದೆ. ಅದರಂತೆ, ಪ್ರಸ್ತುತ ಶಿವಾಜಿನಗರ ರಸೆಲ್ ಮಾರುಕಟ್ಟೆ ಅಭಿವೃದ್ಧಿ ಕಾಮಗಾರಿಗಳನ್ನು ಬೆಂಗಳೂರು ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿಲ್ಲ.<br><br>ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಶಿವಾಜಿನಗರದ ರಸೆಲ್ ಮಾರುಕಟ್ಟೆಯ ಅಭಿವೃದ್ಧಿ/ಪುನಶ್ಚೇತನಕ್ಕಾಗಿ ಯಾವುದೇ ಅನುದಾನವನ್ನು ಮೀಸಲಿರಿಸಿರುವುದಿಲ್ಲ. |
| ಆ | ಅನುದಾನ ಮೀಸಲಿರಿಸಿದರೂ ಇದುವರೆವಿಗೂ ಯಾವುದೇ ಕ್ರಮವನ್ನು ಕೈಗೊಳ್ಳದಿರಲು ಕಾರಣವೇನು; ಯಾವ ಕಾಲಮಿತಿಯೊಳಗೆ ಈ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು; (ಸಂಪೂರ್ಣ ವಿವರ ನೀಡುವುದು) | |
| ಇ | ರಸೆಲ್ ಮಾರುಕಟ್ಟೆಯ ಐತಿಹಾಸಿಕ ಪರಂಪರೆಯ ಕಟ್ಟಡವಾಗಿದ್ದು, ಅದನ್ನು ಸಂರಕ್ಷಿಸಿಕೊಂಡು ಉತ್ತಮ ದರ್ಜೆ ಮಾರುಕಟ್ಟೆಯನ್ನು ನಿರ್ಮಾಣ ಮಾಡಲು ಸರ್ಕಾರ ಯಾವ ರೀತಿ ಯೋಜನೆ ಹಾಕಿಕೊಂಡಿದೆ; (ವಿವರ ನೀಡುವುದು) | |
| ಈ | ಈ ಮಾರುಕಟ್ಟೆಯ ವ್ಯಾಪಾರಸ್ಥರು, ಸ್ಥಳೀಯ ವ್ಯಾಪಾರಸ್ಥರು, ಸ್ಥಳೀಯ ನಿವಾಸಿಗಳು ಮತ್ತು ಸಾರ್ವಜನಿಕರು ಈ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸಲು ಹಲವಾರು ಬಾರಿ ಮನವಿ ಮಾಡಿದರೂ ಇದುವರೆವಿಗೂ ಯಾವುದೇ ಸುಧಾರಣಾ ಕ್ರಮಗಳನ್ನು ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | |
| ಉ | ಬಂದಿದ್ದಲ್ಲಿ, ಈ ಬೇಡಿಕೆಯನ್ನು ಪರಿಗಣಿಸುವ ಕುರಿತು ಸರ್ಕಾರದ ನಿಲುವೇನು? (ಪೂರ್ಣ ವಿವರ ನೀಡುವುದು) | |

ಸಂಖ್ಯೆ: ನಅಇ 70 ಬಿಬಿಎಲ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ